# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಸಾಧಾರಣವಾಗಿ ಮಾನವರೆಲ್ಲ ಒಂದೇ ವಿಧವಾದ ಶರೀರ ಧರ್ಮದವರಾದರೂ, ಒಂದೇ ಶಾಲೆಯಲ್ಲಿ ಕಲಿಯುವರಾದರೂ ಒಂದೇ ವಿಧವಾದ ವಿದ್ಯಾವಂತರಾಗುವುದಿಲ್ಲ. ಯಾವುದರಲ್ಲಾದರೂ ಅಸಮಾನ ಪಾಂಡಿತ್ಯವು ಕೆಲವು ಮಂದಿಗಷ್ಟೇ ಬರುತ್ತದೆ. ಪಾಂಡಿತ್ಯದೊಂದಿಗೆ ವಿನಯ ಗುಣದವರು ಇನ್ನೂ ಕಡಿಮೆ. ಇದೆಲ್ಲ ಈ ಸಂಚಿಕೆಯ "ಘನವಂತ" ಕಥೆಯಲ್ಲಿ ಮನ ಮುಟ್ಟುವಂತಿರುವುದನ್ನು ನೋಡಬಹುದು.

## ಅಮರವಾಣಿ

ಚೋರೋ ದೇವಾಲಯೇ ಸ್ವರ್ಣ ಮನ್ವಿಷ್ಯತಿ ನ ದೈವತಮ್
ಗೃಹೇ ಪ್ರವಿಷ್ಟಃ ಶುನಕಃ ಭಾಂಡಾನ್ವೇಷೀ ಭವೇತ್ ಖಲು

ಮನೆಯೊಳಗೆ ಸೇರಿದ ನಾಯಿ ತಿಂಡಿಗಾಗಿ ಪಾತ್ರಗಳನ್ನು ಹುಡುಕುತ್ತದೆ. ದೇವಾಲಯದೊಳಗೆ ಹೊಕ್ಕ ಕಳ್ಳನು ವಿಗ್ರಹಕ್ಕೆ ಬದಲು ಅದರ ಮೇಲಿರುವ ನಗಗಳನ್ನು ನೋಡುತ್ತಾನೆ. ನಿಜಗುಣವನ್ನು ಬದಲಾಯಿಸಲು ಸಾಧ್ಯವಿಲ್ಲ.

---

ಸಂಪುಟ : ೨೯ ಡಿಸೆಂಬರ್ '೮೯ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



# ಚಂದಮಾಮನ ಹರಟೆ



## ಆಂಗ್ಲ ಕಲಿತ ಚಿಂಪಾಂಜೀ

ಅಟ್ಲಾಂಟಾದಲ್ಲಿ ನಾಲ್ಕು ವಯಸ್ಸಿನ ಒಂದು ಗಿಡ್ಡು ಚಿಂಪಾಂಜೀ ಕೆಲವು ಇಂಗ್ಲೀಷು ಮಾತುಗಳನ್ನು ಅರ್ಥ ಮಾಡಿಕೊಳ್ಳಬಲ್ಲುದು. ಆಂಗ್ಲದಲ್ಲಿ ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಬಾಯಿಯಿಂದ ಹೇಳಲಾಗದೆ ಹೋದರೂ ಆ ಮಾತುಗಳನ್ನು ಸೂಚಿಸುವ ರೇಖಾ ಗಣಿತ ಚಿಹ್ನೆಗಳಿಂದ ತಿಳಿಯ ಪಡಿಸುತ್ತದೆ.

## ಅತಿ ದೊಡ್ಡದಾದ ನಕ್ಷತ್ರ ಮಂಡಲ

ಅಮೆರಿಕಾದ ಅರಿಜೋನಾ ಕಿಟ್‌ಪೀಕ್ ನೇಷನಲ್ ಅಬ್ಸರ್ವೇಟರೀಗೆ ಸೇರಿದ ವಿಜ್ಞಾನವೇತ್ತರು ಇದುವರೆಗೂ ತಿಳಿಯದಿರುವ ಒಂದು ನಕ್ಷತ್ರ ಮಂಡಲ ವನ್ನು ಕಂಡುಹಿಡಿದಿರುವಂತೆ ಹೇಳುತ್ತಾರೆ. ಗಗನಾಂಗಣದಲ್ಲಿ ಅತಿ ದೊಡ್ಡ ದಾದ ಈ ನಕ್ಷತ್ರ ಮಂಡಲವು ಬಿಲಿಯನ್ (ಒಂದು ಲಕ್ಷ ಕೋಟಿ) ಕಾಂತಿ ಸಂವತ್ಸರಗಳಷ್ಟು ದೂರದಲ್ಲಿ ಇರುವಂತೆ ಜಾಕ್‌ಬರ್ನ್ಸ್ ಎಂಬ ಖಗೋಳ ಶಾಸ್ತ್ರಜ್ಞನು ಅಭಿಪ್ರಾಯ ಪಡುತ್ತಾನೆ.





## ಮಾತಾಡುವ ಹಣ !

ಕೆನಡಾದಲ್ಲಿ ದೃಷ್ಟಿಹೀನರಿಗಾಗಿ ಕೈಯಲ್ಲಿರುವ ಹಣ ಎಷ್ಟೆಂದು ತಿಳಿದುಕೊಳ್ಳು ವಂತಹ ಅಪೂರ್ವ ವಿಧಾನವು ರೂಪಿಸಲ್ಪಡುತ್ತಿದೆ. ಈ ಪ್ರಯೋಗಗಳು ಜಯಪ್ರದವಾಗಿ ಬಿಟ್ಟರೆ ಆ ಹಣವು ಇಂಗ್ಲೀಷು, ಫ್ರೆಂಚು ಭಾಷೆಗಳನ್ನು ಮಾತಾಡಬಲ್ಲುದೆಂದು ಹೇಳುತ್ತಾರೆ !

## ನಿಮಗೆ ಗೊತ್ತೇ ?

೧. ಭಾರತೀಯ ಸಂಗೀತಕ್ಕೂ, ನಾಟ್ಯಕ್ಕೂ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಾರ ಪಡಿಸಲು ಕೆಲಸ ಮಾಡಿದ ಪ್ರಮುಖ ಸಹೋದರರು ಯಾರು ?

೨. ಪನ್ನಾಲಾಲ್‌ಘೋಷ್ ಯಾವ ವಾದ್ಯ ವಿಶೇಷ ವನ್ನು ಬಾರಿಸುವುದರಲ್ಲಿ ಪ್ರವೀಣನೆಂದು ನಿಮಗೆ ಗೊತ್ತಿದೆಯೆ ?

೩. ಷೆಹನಾಯ್ ಬಾರಿಸುವುದರಲ್ಲಿ ಅತಿ ಪ್ರಸಿದ್ಧನಾದ ವಿದ್ವಾಂಸನು ಯಾರೆಂದು ನಿಮಗೆ ತಿಳಿದಿದೆಯೇ ?

೪. ಬೇಗಂ ಅಖ್ತರ್ ಎಂತಹ ಹಾಡಿನಲ್ಲಿ ಸುಪ್ರಸಿದ್ಧ ಳಾಗಿದ್ದಾಳೆ ?

೫. ೧೯೬೬ ನೇ ವರ್ಷದಲ್ಲಿ ಐಕ್ಯರಾಜ್ಯ ಸಮಿತಿ ಮಹಾಸಭೆ ಪ್ರಾರಂಭವಾದಾಗ ಗಾಯನ ಕಚೇರಿ ನಡೆಸಿದ ಭಾರತೀಯ ಗಾಯಿಕೆ ಯಾರೆಂದು ನಿಮಗೆ ಗೊತ್ತೇ ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣ ಗಾಥಾವಳಿ :**

# ಇಂದ್ರದ್ಯುಮ್ನ

ಇಂದ್ರದ್ಯುಮ್ನನೆಂಬ ರಾಜನು ಸ್ವರ್ಗವಾಸಿಯಾಗಿ ಬಹಳಕಾಲ ಇಂದ್ರಲೋಕದಲ್ಲೇ ಇದ್ದು ಕಳೆದನು. ಒಂದು ದಿನ ದೇವತೆಗಳು ಅವನೊಂದಿಗೆ, "ಭೂಲೋಕದಲ್ಲಿ ನಿನ್ನ ಕೀರ್ತಿ ಮಾಸಿ ಹೋಗಿದೆ. ಆದುದರಿಂದ ಇನ್ನು ಮೇಲೆ ನೀನು ಇಲ್ಲಿರಲು ಸಾಧ್ಯವಿಲ್ಲ" ಎಂದು ಹೇಳಿ ಅವನನ್ನು ಭೂಲೋಕಕ್ಕೆ ಕಳುಹಿಸಿಬಿಟ್ಟರು.

ಇಂದ್ರದ್ಯುಮ್ನನು ಅರಣ್ಯದೊಳಗೆ ನಡೆಯುತ್ತ, ಇದಿರಾದ ಮಾರ್ಕಂಡೇಯನೆಂಬ ಮುನಿಯನ್ನು ನೋಡಿ, "ನಿಮಗೆ ನನ್ನ ಗುರುತಿದೆಯೆ ?" ಎಂದು ಕೇಳಿದನು.

"ನಿನ್ನ ಗುರುತು ನನಗಿಲ್ಲ" ಎಂದನು ಮಾರ್ಕಂಡೇಯ.

"ನಿಮಗಿಂತ ಹಿರಿಯರು ಯಾರಿದ್ದಾರೆಂದು ಗೊತ್ತೆ ?" ಎಂದು ಕೇಳಿದನು ರಾಜ.

"ನನಗಿಂತ ಹಿರಿಯನಾಗಿ ಪ್ರಾಕಾರಕರ್ಣನೆಂಬ ಗೂಗೆ ಇದ್ದಾನೆ. ಅವನನ್ನು ಕೇಳೋಣ, ಕರೆದೊಯ್ಯುತ್ತೇನೆ, ಬಾ" ಎಂದು ಮುನಿ ರಾಜನನ್ನು ಕರೆದುಕೊಂಡು ಗೂಗೆಯ ಬಳಿಗೆ ಹೋದನು.

ಗೂಗೆ ಕೂಡಾ ರಾಜನನ್ನು ನೋಡಿ "ನಾನು ನಿನ್ನನ್ನು ಅರಿಯೆನು, ನನಗಿಂತ ಹಿರಿಯನಾಗಿ ನಾಳೀಕಜಂಘನೆಂಬ ಕೊಕ್ಕರೆಯಿರುವನು. ಅವನನ್ನು ಕೇಳೋಣ, ಬನ್ನಿ" ಎಂದು ಅವರಿಬ್ಬರನ್ನೂ ಕರೆದುಕೊಂಡು ಕೊಕ್ಕರೆಯ ಬಳಿಗೆ ಹೋಯಿತು.

ಸಂಗತಿಯನ್ನು ತಿಳಿದು ಕೊಕ್ಕರೆ, "ನಿನ್ನನು ನೋಡಿದ ನೆನಪು ನನಗಿಲ್ಲ. ನಾವು ಮೂವರೂ ಕೂಡಿ ನನಗಿಂತ ಹಿರಿಯನಾಗಿರುವ ಅಕೂಪಾರನೆಂಬ ಆಮೆಯನ್ನು ಕೇಳೋಣ, ಬನ್ನಿ" ಎಂದು ಹೇಳಿ ಆಮೆಯ ಬಳಿಗೆ ಕರೆದುಕೊಂಡು ಹೋಯಿತು.

ಆಮೆ ಇಂದ್ರದ್ಯುಮ್ನನನ್ನು ನೋಡಿದ ಕೂಡಲೇ ಗುರುತಿಸಿ ಸ್ವಾಗತ ಹೇಳಿ, ಸಂಗತಿಯನ್ನು ತಿಳಿದ ಮೇಲೆ, "ರಾಜಾ, ನಿನ್ನನ್ನು ನಾನು ಮರೆಯಲು ಸಾಧ್ಯವುಂಟೆ ? ನೀನು ದಾನಶೀಲನಾದ ಇಂದ್ರದ್ಯುಮ್ನ ಮಹಾರಾಜನು, ನೀನು ದಾನಮಾಡಿದ ಗೋವುಗಳ ಗೊರಸಿನ ತುಳಿತದಿಂದಲೇ ಈ ಕೊಳವು ಏರ್ಪಟ್ಟಿದೆ. ಅಂತಲೇ ಇದಕ್ಕೆ ಇಂದ್ರದ್ಯುಮ್ನ ತಟಾಕವೆಂದು ಹೆಸರು" ಎಂದಿತು ಅತ್ಯಾನಂದದಿಂದ.

ಮರುಕ್ಷಣದಲ್ಲಿ ದೇವಲೋಕದಿಂದ ದಿವ್ಯರಥವು ಬಂದು, ಅಲ್ಲಿ ಇಳಿಯಿತು. "ರಾಜಾ, ನಿನ್ನ ಕೀರ್ತಿ ಇನ್ನೂ ಭೂಮಿಯಲ್ಲಿ ನಿಂತಿದೆ. ನೀನು ಇಂದ್ರಲೋಕಕ್ಕೆ ಬರಬಹುದು" ಎಂದರು ದೇವದೂತರು. ನಾಲ್ವರಿಂದಲೂ ಅಪ್ಪಣೆ ಪಡೆದು ರಾಜನು ಸ್ವರ್ಗಕ್ಕೆ ಹೋಗಿ ಸೇರಿದನು.





# ಕಳ್ಳನಿಂದಾದಮೇಲು

**ಒಂ**ದು ಊರಿನಲ್ಲಿ ಕನಕರಾಜ ಮತ್ತು ಕನಕಮ್ಮ ಎಂಬವರು ಗಂಡ ಹೆಂಡಿರಾಗಿದ್ದರು. ಅವರಿಬ್ಬರ ಹೆಸರುಗಳು ಒಂದಾಗಿರುವ ಹಾಗೆಯೇ ಇಬ್ಬರ ಬುದ್ಧಿಗಳೂ ಒಂದೇ ಬಗೆಯಾಗಿ ಹೊಂದಿತ್ತು. ಮದುವೆಯಾದ ಹೊಸ ದಿನಗಳಲ್ಲಿ ಹೆಂಡತಿ ಸೀರೆ ತರಲು ಹೇಳಿದರೆ ಕನಕರಾಜನು ಜವುಳಿ ಅಂಗಡಿಗೆ ಹೋಗಿ ತನ್ನ ಬುದ್ಧಿವಂತಿಕೆಯಿಂದ ಒಂದು ಸೀರೆಯನ್ನು ಕದ್ದು ತಂದು ಬಿಟ್ಟನು. ಈ ಸಂಗತಿಯನ್ನು ತಿಳಿದ ಕನಕಮ್ಮ ಗಂಡನ ಬುದ್ಧಿವಂತಿಕೆಯನ್ನು ನೋಡಿ ತನ್ನ ಮಹಾ ಭಾಗ್ಯವನ್ನು ನೆನೆದು ಸಂತೋಷದಿಂದ ಉಬ್ಬಿದಳು.

ಆಮೇಲೆ ಅವರಿಬ್ಬರೂ ತಮ್ಮೊಳಗೆ ಕಳ್ಳತನದ ಗುಣವನ್ನು ಕುರಿತು ಮಾತಾಡಿಕೊಂಡು, ಒಮ್ಮನಸ್ಸಿನವರಾಗಿ, ಅಲ್ಲಿ ಇಲ್ಲಿ ಚಿಕ್ಕವೂ ದೊಡ್ಡವೂ ಕಳ್ಳತನಗಳನ್ನು ಮಾಡಲು ತೊಡಗಿದರು. ಆಗ ಬಾಡಿಗೆಯ ಮನೆಯಲ್ಲಿದ್ದ ಅವರು ಇನ್ನು ಅಲ್ಲಿದ್ದರೆ ತಮ್ಮ ಕಳ್ಳತನಗಳು ಹೊರಬೀಳುವುದೆಂಬ ಅನುಮಾನ ಬಂದುದರಿಂದ, ಕೂಡಲೇ ಇನ್ನೊಂದು ಬಾಡಿಗೆ ಮನೆ ಹುಡುಕಿ ಅಲ್ಲಿಗೆ ಹೋಗಿ ಸೇರಿಕೊಂಡರು.

ಕನಕಮ್ಮ ಹೊಸ ಬಾಡಿಗೆ ಮನೆಗೆ ಸೇರಿದ ಕೂಡಲೇ ಮನೆಯ ಹಿಂಬದಿಯಲ್ಲಿ ಬೆಳೆದ ಗಿಡಗಳ ಹೂಗಳನ್ನು ಕೊಯಿದು ಮಾಲೆಕಟ್ಟಿ. ಪಕ್ಕದ ಮನೆಯವಳ ಬಳಿಗೆ ಹೋಗಿ "ಅಕ್ಕಯ್ಯಾ. ನೀನು ಮಹಾಲಕ್ಷ್ಮಿ ಹಾಗೆ ಕಾಣುತ್ತೀ. ನಿನಗೆ ಮುಡಿಸಿ ಬಿಡುವಾ ಅಂತ ಈ ಹೂವಿನದಂಡೆ ತಂದೆ" ಎನ್ನುತ್ತಾ ಸರಸಮಾತಿಗೆ ತೊಡಗಿದಳು.

ಹೀಗೆ ಸ್ವಲ್ಪ ಹೊತ್ತು ಹರಟೆ ಹೊಡೆಯುವಳು. ಆಮೇಲೆ ಸಮಯ ಸಿಕ್ಕಿದ ಕೂಡಲೇ ಯಾವ ತಂಬಿಗೆಯೋ. ತಟ್ಟೆಯೋ. ಸೌಟೋ ಎತ್ತಿಕೊಂಡು ತನ್ನ ಸೆರಗಿನೊಳಗೆ ಹುದುಗಿಸಿ ಆನಂದದಿಂದ ಕುಲುಕುತ್ತ ಮನೆಗೆ ಹಿಂದಿರುಗುವಳು.

ಈಗ ಹೊಸತಾಗಿ ಬಂದು ಸೇರಿದ ಮನೆಯ ಸುತ್ತುಮುತ್ತಿನ ಮನೆಗಳಲ್ಲಿ ಕನಕಮ್ಮ ಅನೇಕ ಚಿಲ್ಲರೆ ಕಳ್ಳತನಗಳನ್ನು ಮಾಡಿದಳು. ಒಂದು ದಿನ ಮಧ್ಯಾಹ್ನ ತಿರುಗಿದ ಮೇಲೆ ಬರುವ ಬಿಡುವಿನ ವೇಳೆಯಲ್ಲಿ ನಾಲ್ಕಾರು ಮನೆಗಳ ಅಮ್ಮಂದಿರು ಅಕ್ಕಂದಿರು ಸೇರಿಕೊಂಡು ಏನೇನೋ ಮಾತಾಡಿಕೊಳ್ಳುತ್ತಿರುವಾಗ ಕನಕಮ್ಮ, "ನಾವು ಇಲ್ಲಿಗೆ

ಎಂ. ಕೆ. ಈಶ್ವರರಾವ್



ಬಂದು ಸೇರಿದ ದಿನಗಳಲ್ಲಿ ಅಷ್ಟೇನೂ ಗೊತ್ತಾಗಲಿಲ್ಲ. ಈಗ ಕಳ್ಳತನಗಳು ಶುರುವಾಗಿದೆ. ಮೊನ್ನೆ ನಮ್ಮವರದೊಂದು ಧೋತಿ ಹೋಯಿತು. ನಿನ್ನೆ ಬಾವಿಯ ಹತ್ತಿರ ಇಟ್ಟಿದ್ದ ಹಿತ್ತಾಳೆಯ ಪಾತ್ರ ಕಾಣೆಯಾಗಿದೆ. ಅದೇನು ಮಾಯವೋ ತಿಳಿಯೋದಿಲ್ಲಮ್ಮಾ!" ಎಂದಳು.

ಆ ಮಾತು ಕೇಳಿ ಉಳಿದವರು ಕೂಡಾ ತಮ್ಮ ಮನೆಯಲ್ಲಿಯೂ ಏನೋ ವಸ್ತುಗಳು ಕಾಣೆಯಾಗಿ ಹೋಗುವ ಸಂಗತಿಯನ್ನು ಹೇಳಿದರು.

"ಹೀಗಾದರೆ ನಾವು ಸುಮ್ಮನಿರುವುದು ಸರಿಯೆ? ಹೀಗೆ ಸುಮ್ಮನಿದ್ದರೆ ಯಾವ ಪ್ರಯೋಜನವೂ ಇಲ್ಲ. ಇನ್ನು ಮೇಲೆ ತುಂಬ ಜಾಗ್ರತೆಯಿಂದಿರಬೇಕು. ನೋಡುತ್ತಾ ಇರಿ. ಆ ಕಳ್ಳನನ್ನು ಒಂದು ತಿಂಗಳೊಳಗೆ ನಾನು ಉಪಾಯಮಾಡಿ ಹಿಡಿಯದೆ ಬಿಡುವುದಿಲ್ಲ" ಎಂದಳು ಕನಕಮ್ಮ. ಹೀಗೆ ಕಳ್ಳತನಗಳ ಪ್ರಸಕ್ತಿಯನ್ನು ತಾನೇ ಮುಂದೆ ತಂದು ಬಿಟ್ಟರೆ ತನ್ನ ಮೇಲೆ ಯಾರಿಗೂ ಅನುಮಾನ ಬರುವುದಿಲ್ಲವೆಂದು ಅವಳ ನಂಬುಗೆ. ಕನಕರಾಜನು ಏನು ಮಾಡುವನೆಂದರೆ, ಮನೆಯಲ್ಲಿರುವ ಕಳ್ಳ ವಸ್ತುಗಳನ್ನು ಪಟ್ಟಣದಲ್ಲಿ ಮಾರಿ, ಆ ಹಣದಿಂದ ಜೂಜಾಡಿ ಲಾಭಗಳಿಸುತ್ತ, ಎರಡು ಮೂರು ದಿನಗಳ ಮೇಲೆ ಮನೆಗೆ ಹಿಂದಿರುಗುತ್ತಿದ್ದನು.

ಒಂದು ದಿನ ಕನಕಮ್ಮ ಗಂಡನೊಂದಿಗೆ, "ಯಾಕೋ ಇತ್ತೀಚೆಗೆ ನಿಮಗೆ ಮೈ ಬಗ್ಗುವುದೇ ಇಲ್ಲ. ಏನು ಸಂಪಾದಿಸ ಬೇಕಾದರೂ ನಾನೊಬ್ಬಳೇ ಸಂಪಾದಿಸ ಬೇಕಾಗಿದೆ" ಎಂದಳು ಕೋಪದಿಂದ.

"ಅಂದರೆ ಏನು ನಿನ್ನ ಮಾತಿನ ಅರ್ಥ? ನಾನು ಏನು ಮಾಡಬೇಕೆನ್ನುವಿ?" ಎಂದು ಕನಕರಾಜನು ಬೇಸರದಿಂದ ಕೇಳಿದನು.

"ನೋಡಿ, ಆಚೇಮನೆಯ ಪಾರ್ವತಮ್ಮನ ಮನೆಯ ಹಿಂದೆ ಚಂದ್ರಬಾಳೇ ಗೊನೆಬಿಟ್ಟು ಬಣ್ಣ ತುಂಬಿ ಹೊಳೆಯುತ್ತಾ ಇದೆ. ಇವತ್ತು ರಾತ್ರಿ ಎಲ್ಲರಿಗೂ ನಿದ್ದೆ ಬಂದ ಸಮಯ ನೋಡಿ ನಾವು ಅಲ್ಲಿಗೆ ಹೋಗಿ ಆ ಗೊನೆಯನ್ನು ಕೊಯ್ದು ತಂದು ಬಿಡುವ. ಆ ಗೊನೆಯಲ್ಲಿ ನೂರಕ್ಕಿಂತ ಮೇಲೆಯೇ ಕಾಯಿಗಳಿವೆ" ಎಂದಳು ಕನಕಮ್ಮ.

"ಅಷ್ಟೇ ತಾನೇ? ಹಾಗೆಯೇ ತಂದರಾಯಿತು" ಎಂದನು ಕನಕರಾಜ ಉತ್ಸಾಹದಿಂದ.

ಆ ದಿನ ಮಧ್ಯ ರಾತ್ರಿಯ ಸಮಯದಲ್ಲಿ ಕನಕರಾಜನು ದೊಡ್ಡ ಕತ್ತಿ ತೆಗೆದುಕೊಂಡು, ಪಾರ್ವತಮ್ಮನ ಮನೆಯ ಹಿಂಬದಿಯ ಗೋಡೆಯನ್ನೇರಿ ಆಚೆಯ ಬದಿಗೆ ಧುಮುಕಿದನು. ಅವನು ಬಾಳೇ ಗೊನೆಯನ್ನು ಕೊಯಿದು ಗೋಡೆಯ ಮೇಲಿನಿಂದಾಗಿ ಕನಕಮ್ಮನಿಗೆ ಕೊಟ್ಟು, ಮತ್ತೆ ಗೋಡೆಯ ಮೇಲೆ ಏರಿ, ಈಚೆಗೆ ಹಾರಿದನು. ಇಬ್ಬರೂ ಗೊನೆಯನ್ನು ಎತ್ತಿಕೊಂಡು ತಮ್ಮ ಮನೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡರು.

ಕನಕಮ್ಮ ಬಾಳೇ ಗೊನೆಯನ್ನು ಗೋಣೀ ಚೀಲದೊಳಗೆ ಸೇರಿಸಿ, ಅಟ್ಟದ ಮೇಲಿಟ್ಟಳು. ಆಮೇಲೆ ಇಬ್ಬರೂ ತೃಪ್ತಿಯಿಂದ ತಮ್ಮ ಕಳ್ಳತನದ ಜಾಣತನಗಳನ್ನು ಹೇಳಿಕೊಳ್ಳುತ್ತ ತೃಪ್ತಿಯಿಂದ ಮಲಗಿ ನಿದ್ದೆ ಮಾಡಿದರು.

ಮತ್ತೆ ಬೆಳಂಜಾಮದ ಹೊತ್ತಿನಲ್ಲಿ ಕನಕರಾಜನು ಕೂಗಿದ ಬೊಬ್ಬೆಯಿಂದ ಹೆದರಿಬಿದ್ದು ಕನಕಮ್ಮ ಎಚ್ಚರಕ್ಕೆ ಬಂದಳು. ನೋಡಿದರೆ ಮನೆಯೊಳಗೆಲ್ಲಾ ಚೆಲ್ಲಾಪಿಲ್ಲಿಯಾಗಿದೆ. ಮನೆಯ ಹೊರಬಾಗಿಲು ಆ ಎಂದು ತೆರೆದುಕೊಂಡಿತ್ತು. ಕಳ್ಳತನವಾಯಿತೆಂದುಕೊಂಡು ಕನಕಮ್ಮ ಭಯಪಡುತ್ತ ತನ್ನ ಕೊರಳನ್ನು ತಡವಿಕೊಂಡಳು. ಅಲ್ಲಿ ಇರಬೇಕಾದ ಬಂಗಾರದ ಸರವು ಇರಲಿಲ್ಲ. ಅವಳು ಕೆಟ್ಟದನಿಯಿಂದ ಕಿರಿಚಿದಳು.

ಅಷ್ಟರಲ್ಲಿ ಕನಕರಾಜನು ತೆರೆದುಕೊಂಡಿದ್ದ ಬಟ್ಟೆಗಳ ಪೆಟ್ಟಿಗೆಯ ತಳಭಾಗವನ್ನು ಹುಡುಕುತ್ತ "ಅಯ್ಯೋ!" ಎಂದು ದೊಡ್ಡ ಧ್ವನಿಯಿಂದ ಕೂಗಿ, "ನೋಡಿದೆಯೇನೇ? ಇದರಲ್ಲಿ ಇಟ್ಟಿದ್ದ ಮೂರು ಸಾವಿರ ರೂಪಾಯಿ ಕೂಡಾ ಕಳ್ಳ ಕದ್ದುಕೊಂಡು ಹೋಗಿ ಬಿಟ್ಟ!" ಎಂದನು.

ಅವರಿಬ್ಬರ ಕೂಗು ಕಿರಿಚಾಟ ಕೇಳಿ ನೆರೆಹೊರೆ ಮನೆಯವರೆಲ್ಲಾ ಓಡೋಡಿ ಅಲ್ಲಿಗೆ ಬಂದರು.

ಕನಕಮ್ಮ ರೋದಿಸುತ್ತಾ, "ಏನೊಂದೂ ಉಳಿದಿಲ್ಲಾ! ಇದ್ದದ್ದೆಲ್ಲಾ ಹೋಯಿತಲ್ಲಾ! ಅಯ್ಯೋ ದೇವರೇ!" ಎಂದು ತಲೆ ಕೂದಲು ಕೆದರಿ ಗೋಳಾಡಿದಳು.

ಹಾಗೆ ಬಂದವರಲ್ಲಿ ಪಾರ್ವತಮ್ಮನೂ ಇದ್ದಳು. ಅವಳು ಕೋಣೆಯ ನಡುವಿನ ಗೋಡೆಗೆ ಒರಗಿಸಿಟ್ಟಿದ್ದ ಚಂದ್ರಬಾಳೇ ಗೊನೆಯನ್ನು ನೋಡಿ, ಬೆರಗು ಕಣ್ಣು ಮಾಡಿಕೊಂಡು, "ಇದೇನಿದೂ! ಬೆಳಿಗ್ಗೆ ನಮ್ಮ ತೋಟದ ಗೊನೆ ಕಾಣದೇ ಇದ್ದದ್ದು ನೋಡಿ ಸಂಕಟಪಡುತ್ತಾ ಇದ್ದೆ. ಆ ಗೊನೆ ನಿಮ್ಮ ಮನೆಯೊಳಗೆ ಹೇಗೆ ಬಂತು?" ಎಂದು ಕನಕರಾಜ ಕನಕಮ್ಮ ಇಬ್ಬರನ್ನೂ ನೋಡಿ ಕೇಳಿದಳು.



ಅವರಿಗೂ ಆಶ್ಚರ್ಯವಾಗಿತ್ತು. ಅಟ್ಟದ ಮೇಲೆ ಇರಬೇಕಾಗಿದ್ದ ಬಾಳೇಗೊನೆ ಕೆಳಗೆ ಹೇಗೆ ಬಂತೆಂದು ಗೊತ್ತಾಗದೆ ಅಳುಮೋರೆಗಳಿಂದ ಮಿಕಿ ಮಿಕಿ ನೋಡಿದರು. ಆ ಗೊನೆಯ ಕಾಯಿಗೆ ಚುಚ್ಚಿಕೊಂಡಿದ್ದ ಒಂದು ಕಾಗದವನ್ನು ನೋಡಿ ಪಾರ್ವತಮ್ಮ ಆಶ್ಚರ್ಯ ಪಡುತ್ತ. ಅದನ್ನು ಕಿತ್ತುಕೊಂಡಳು. ಅದರಲ್ಲಿ ಬರೆದಿರುವುದನ್ನು ಅವಳು ಮೊದಲು ತನ್ನೊಳಗೇ ಓದಿಕೊಂಡು, ಆಮೇಲೆ ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಓದಿದಳು :

"ಇಷ್ಟುಕಾಲದವರೆಗೆ ನಾನು ನಿರುದ್ಯೋಗಿಯಾಗಿದ್ದೆನೇ ಹೊರತು ಕಳ್ಳನಾಗಲಿಲ್ಲ. ಉದ್ಯೋಗ ಹುಡುಕುವ ಪ್ರಯತ್ನದಲ್ಲಿ ಊರು ತಿರುಗುತ್ತ, ರಾತ್ರಿ ಹೊತ್ತು ತುಂಬಾ ಆದ ಮೇಲೆ ಈ ಬೀದಿಯಲ್ಲಿ ನಡೆಯುತ್ತ, ಪಕ್ಕದ ಮನೆಯ ಬಾಳೇಗೊನೆ ಕದ್ದುಕೊಳ್ಳುವ ನಿಮ್ಮಿಬ್ಬರನ್ನೂ ನೋಡಿದೆನು. ಕೂಡಲೇ ನಾನು ನಿಮ್ಮ ಮನೆಯೊಳಗೆ ಹೊಕ್ಕು ಅಡಿಗೇ ಮನೆಯ ಮೂಲೆಯಲ್ಲಿ ಕುಳಿತುಕೊಂಡೆ. ನಿಮ್ಮ ಸಂಭಾಷಣೆಗಳನ್ನೆಲ್ಲಾ ಕೇಳಿದೆ. ನಿಮ್ಮ ಕಳ್ಳತನದ ಬುದ್ಧಿ ನಾಲ್ಕು ಮಂದಿಗೆ ತಿಳಿಯಬೇಕೆಂತಲೇ ಅಟ್ಟದಲ್ಲಿರುವ ಬಾಳೇಗೊನೆಯನ್ನು ಕೆಳಗಿಸಿ ಗೋಡೆಯ ಬದಿಯಲ್ಲಿ ಒರಗಿಸಿದ್ದೇನೆ. ನಿಮ್ಮ ಸೊತ್ತು ನಿಮ್ಮ ಕಷ್ಟಾರ್ಜಿತವಲ್ಲವೆಂದು ತಿಳಿಯಿತು. ಎಲ್ಲವೂ ಕಳ್ಳತನದಿಂದ ಸಂಪಾದಿಸಿದ್ದೀರಿ. ಆದ್ದರಿಂದಲೇ ಪೆಟ್ಟಿಗೆಯಲ್ಲಿರುವ ನಿಮ್ಮ ಹಣವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. ಇದರಿಂದ ಏನಾದರೂ ವ್ಯಾಪಾರಮಾಡಿ ನಾನು ಮರ್ಯಾದೆಯಿಂದ ಬದುಕುತ್ತೇನೆ."

ಪಾರ್ವತಮ್ಮ ಹೀಗೆ ಆ ಕಾಗದದಲ್ಲಿದ್ದುದನ್ನು ಓದಿ ಮುಗಿಸುತ್ತಲೇ, ಅಲ್ಲಿ ಸೇರಿದವರೆಲ್ಲಾ, ಕನಕಮ್ಮ ಕನಕರಾಜರಿಬ್ಬರಿಗೂ ಕಿವಿತುಂಬಿ ಸೂಸುವಷ್ಟು ಬೈಗಳನ್ನು ಹೇಳಿದರು. "ನಿಮ್ಮಿಬ್ಬರನ್ನೂ ಜೈಲಿನಲ್ಲಿ ಹಾಕಿಸಬೇಕು. ಆದರೆ ಈಗ ನೀವು ಕಳ್ಳತನದಿಂದ ಸಂಪಾದಿಸಿದ್ದನ್ನೆಲ್ಲಾ ಕಳೆದುಕೊಂಡಿದ್ದೀರಿ. ಆದ್ದರಿಂದ ಇಷ್ಟಕ್ಕೆ ಬಿಟ್ಟುಬಿಡುತ್ತೇವೆ. ಇನ್ನು ಮೇಲಾದರೂ ಬುದ್ಧಿಯಿಂದ ಬದುಕಿರಿ" ಎಂದರು.

ಪಾರ್ವತಮ್ಮ ತನ್ನ ಬಾಳೇಗೊನೆಯನ್ನು ತನ್ನ ಮನೆಗೆ ಒಯ್ದಳು.

ಕನಕರಾಜ ದಂಪತಿಗಳು ಆ ಬೀದಿಯಲ್ಲಿ ಯಾರಿಗೂ ಮುಖ ತೋರಿಸಲಾಗದೆ, ಆ ರಾತ್ರಿಯಲ್ಲಿ ಮನೆ ಖಾಲೀಮಾಡಿ, ಯಾರಿಗೂ ಹೇಳದೆ ಎತ್ತಲೋ ಹೊರಟುಹೋದರು.

ಹೆಸರು ತಿಳಿಯದ ಕಳ್ಳನು ತಮಗೆಲ್ಲ ಒಳಿತು ಮಾಡಿದನೆಂದು ಆ ಊರಿನವರು ಹೇಳಿಕೊಂಡು ಕಳ್ಳನನ್ನು ಹೊಗಳುವಂತಾಯಿತು.



# ಬಹುಮಾನಗಳ ರಾಜ

ಚಂದ್ರನಗರವನ್ನು ಪಾಲಿಸುವ ಸುಂದರವರ್ಮನೆಂಬ ರಾಜನಿಗೆ ಪ್ರಾರಂಭದಿಂದಲೇ ಬಹುಮಾನಗಳ ಹುಚ್ಚು. ಆದರೆ ವೃದ್ಧಾಪ್ಯದ ದಶೆ ಸಮೀಪಿಸುವಾಗ ಅದು ಇನ್ನಷ್ಟು ಮಿತಿಮೀರಿ ಹೋದುದರಿಂದ, ಮಂತ್ರಿ ರಾಜನ ಪಕ್ಕದಲ್ಲೇ ಇದ್ದು ತಡೆಯುತ್ತಿದ್ದನು.

ಒಂದು ದಿನ ರಾಜನು ಮಂತ್ರಿ ಮತ್ತು ಸೇವಕರೊಂದಿಗೆ ಉದ್ಯಾನದಲ್ಲಿ ವಿಹರಿಸುತ್ತಿರುವಾಗ ರಾಜನಲ್ಲಿ ಒಂದು ಹೊಸ ಬಗೆಯ ಹುಚ್ಚು ಕಾಣಿಸಿತು. ರಾಜನು ಭಟನ ಮೂಲಕ ಒಂದು ಹಕ್ಕಿಯನ್ನು ಹಿಡಿದು ತರಿಸಿ "ಈ ಹಕ್ಕಿಯ ಹೆಸರೇನು ?" ಎಂದು ಕೇಳಿದನು.

ಅಲ್ಲಿರುವ ಯಾರಿಂದಲೂ ಅದರ ಹೆಸರನ್ನು ಹೇಳಲು ಸಾಧ್ಯವಾಗಲಿಲ್ಲ. ಒಬ್ಬನು ಮುಂದೆ ಬಂದು, "ಇದು ಹೊಸ ಹಕ್ಕಿಯಲ್ಲವೇ ಪ್ರಭೂ ? ಅದರ ಹೆಸರೇನೆಂದು ಅದನ್ನೇ ಕೇಳಬೇಕು" ಎಂದನು.

"ಚೆನ್ನಾಗಿ ಹೇಳಿದೆ" ಎಂದು ರಾಜನು ತನ್ನ ಕೈಯಲ್ಲಿದ್ದ ಕಂಕಣವನ್ನು ತೆಗೆದು ಅವನಿಗೆ ಕೊಟ್ಟು, ಹಕ್ಕಿಯ ಹತ್ತಿರ ಹೆಸರೇನೆಂದು ಕೇಳಿದನು.

ಅದು ಮಾತಾಡದಿರಲು, ಮತ್ತೊಬ್ಬನು, "ಹಕ್ಕಿಗೆ ಕಿವುಡೋ ಏನೋ ? ಆದರಿಂದಲೇ ನೀವೇನು ಕೇಳಿದರೂ ಅದಕ್ಕೆ ಕೇಳಿಸುವುದಿಲ್ಲ" ಎಂದನು.

ಅವನ ಮಾತಿಗೆ ಮೆಚ್ಚಿದ ರಾಜನು ಅವನಿಗೆ ಮತ್ತೊಂದು ಕಂಕಣವನ್ನು ಬಹುಮಾನ ಕೊಟ್ಟನು. ಹಕ್ಕಿಯನ್ನು ಅರ್ಥಮಾಡಿಕೊಂಡಂತೆ ಅಲ್ಲಿರುವವರು ಒಂದೊಂದು ಹೇಳಿ ಬಹುಮಾನದ ರೂಪದಲ್ಲಿ ಎಲ್ಲಾ ಆಭರಣಗಳನ್ನೂ ತೆಗೆದುಕೊಳ್ಳುವರೆಂದುಕೊಂಡು ಮಂತ್ರಿ ಭಟನಿಗೆ ಸನ್ನೆ ಮಾಡಿ ಹಕ್ಕಿಯನ್ನು ಬಿಡಿಸಿ ಹಾರಿಸಿದನು.

ಹಕ್ಕಿ ಹಾರಿ ಹೋಗುವುದನ್ನು ನೋಡಿ ರಾಜನು ವ್ಯಾಕುಲಪಡುತ್ತಿರಲು, ಮಂತ್ರಿ ಅವನೊಂದಿಗೆ, "ಅದಕ್ಕೆ ಹೆಸರು ತಿಳಿಯದು, ಮಾತೂ ಆಡದು. ಅಂತಹುದು ನಮ್ಮ ಹತ್ತಿರ ಇರಬಹುದೆ ? ಹಾರಿ ಹೋಗುವುದೇ ಒಳ್ಳೆಯದು" ಎಂದನು.

"ಶಾಭಾಸ್ ! ಮಂತ್ರೀ ! ಮುತ್ತಿನಂಥ ಮಾತು ಹೇಳಿದೆ !" ಎಂದು ರಾಜನು ತನ್ನ ಕೊರಳಲ್ಲಿದ್ದ ರತ್ನ ಹಾರವನ್ನು ತೆಗೆದು ಮಂತ್ರಿಯ ಕೊರಳಿಗೆ ಹಾಕಿದನು.





# ಘನವಂತ

ಒಂದು ಕಾಲದಲ್ಲಿ ಕರ್ಪೂರ ದೇಶವನ್ನು ಆಳಿಕೊಂಡಿದ್ದ ಮಾಣಿಕ್ಯವರ್ಮ ಮಹಾರಾಜನ ಆಸ್ಥಾನದಲ್ಲಿ ಗಂಗಾಧರ ಮಿಶ್ರನೆಂಬ ಒಬ್ಬ ಕವಿ ಇದ್ದನು. ಅವನು ಬಾಲ್ಯದಿಂದಲೇ ರಾಜನಿಗೆ ಮಿತ್ರನಾಗಿದ್ದನು. ಅನೇಕ ಬಗೆಯ ಸುರಸವಾದ ಕಾವ್ಯಗಳನ್ನು ಬರೆದು, ಸಾಹಿತ್ಯಪ್ರಿಯನಾದ ಮಾಣಿಕ್ಯವರ್ಮ ರಾಜನಿಗೆ ಅತ್ಯಂತ ಸನ್ನಿಹಿತನಾಗಿದ್ದನು ಆ ಕವಿ.

ಒಂದುಸಾರಿ ಮಾಣಿಕ್ಯವರ್ಮ ರಾಜನು ಬರಲಿರುವ ತನ್ನ ಜನ್ಮದಿನೋತ್ಸವದ ಸಂದರ್ಭದಲ್ಲಿ ರಾಜ್ಯದೊಳಗೆ ಮೇಲಾದ ಒಬ್ಬ ದೊಡ್ಡ ಕವಿಗೆ ಮಾನ್ಯಗಳನ್ನೂ ಅಗ್ರಹಾರಗಳನ್ನೂ ಕೊಟ್ಟು ಸನ್ಮಾನಿಸಬೇಕೆಂದು ನಿಶ್ಚಯಿಸಿದನು. ಆ ಸನ್ಮಾನವು ಇಂತಹವರಿಗೇ ದೊರೆಯುವುದೆಂದು ಮುಂದಾಗಿ ತಿಳಿಯಪಡಿಸಲಾಗುವುದೆಂತಲೂ ಪ್ರಕಟಪಡಿಸಿದನು ಮಾಣಿಕ್ಯವರ್ಮ ರಾಜ.

ಇದು ನಡೆದ ಕೆಲವು ದಿನಗಳ ಮೇಲೆ ಒಂದು ದಿನ ಗಂಗಾಧರ ಮಿಶ್ರನು ತನ್ನ ಮನೆಯಲ್ಲಿ ಕೆಲವಂದಿ ಕವಿ ಮಿತ್ರರೊಂದಿಗೆ ಇಷ್ಟಾಗೋಷ್ಠಿ ನಡೆಸಿಕೊಂಡಿರುವಾಗ, ಸುಧಾಕರನೆಂಬ ಪಂಡಿತನು, "ವಿರಿಂಚಿ ಪಟ್ಟಣದಲ್ಲಿರುವ ಸ್ವರ್ಣಕುಂತಲನೆಂಬ ಕವಿಯನ್ನು ಮಹಾರಾಜನು ಸನ್ಮಾನಿಸುವನೆಂದು ನನಗೆ ಗೊತ್ತಾಗಿದೆ. ರಾಜನು ಈ ಸಂಗತಿಯನ್ನು ರಾಜದೂತನ ಮೂಲಕ ಅವನಿಗೆ ಆಗಲೇ ತಿಳಿಸಿದ್ದಾನಂತೆ. ಜನ್ಮದಿನೋತ್ಸವಕ್ಕೆ ಬರಬೇಕೆಂದು ಅವನಿಗೆ ಪ್ರತ್ಯೇಕ ಆಮಂತ್ರಣವೂ ಹೋಗಿದೆಯೆಂದು ಗೊತ್ತಾಗಿದೆ" ಎಂದನು.

"ಇದು ನಂಬುವುದು ಕಷ್ಟ. ಮಹಾರಾಜನಿಗೆ ತುಂಬ ಸನ್ನಿಹಿತನಾದ ಗಂಗಾಧರ ಮಿಶ್ರನಿಗೆ ತಿಳಿಯದ ಸಂಗತಿ ನಿಮಗೆ ತಿಳಿಯುವುದೆಂದರೆ ಆಶ್ಚರ್ಯವೇ ಸರಿ. ಯಾರೋ ನರವಿಲ್ಲದ ನಾಲಗೆಯಲ್ಲಿ ಏನೋ ಹೊರಳಿಸಿರಬೇಕು" ಎಂದನೊಬ್ಬ ಕವಿ.

"ಮಹಾರಾಜರು ವಿರಿಂಚಿ ಪಟ್ಟಣಕ್ಕೆ ಕಳುಹಿಸಿದ ರಾಜದೂತನ ಹೆಂಡತಿ ನನ್ನ ಮನೆಯ ಕೆಲಸದವಳಿಗೆ ಸ್ನೇಹಿತಿ. ಈ ಸಂಗತಿ ಅವಳ ಮೂಲಕ ನನಗೆ ಗೊತ್ತಾಯಿತು" ಎಂದನು ಸುಧಾಕರ ಪಂಡಿತ.

ಈ ವಿವರಗಳು ತಿಳಿದ ಮೇಲೆ ಗಂಗಾಧರ ಮಿಶ್ರನಿಗೆ ಒಂದು ತರದ ಆವೇಶವೆದ್ದಿತು. ಎಲ್ಲರೂ ಹೊರಟುಹೋದ ಮೇಲೆ ಅವನು ಮಾಣಿಕ್ಯವರ್ಮ

ಜಿ. ರತ್ನ

ರಾಜನ ಬಳಿಗೆ ಹೋಗಿ. "ಹೌದೇನು ? ತಾವು ತಮ್ಮ ಜನ್ಮದಿನೋತ್ಸವದ ದಿನ ಸತ್ಕರಿಸಲಿರುವ ವಿಷಯದಲ್ಲಿ ಒಂದು ನಿಶ್ಚಯಕ್ಕೆ ಬಂದಿರುವಿರೆಂದು ನಗರದಲ್ಲಿ ವದಂತಿ ಎದ್ದಿದೆ. ಆ ಘನವಂತನು ಯಾರೆಂದು ನಾನು ತಿಳಿದುಕೊಳ್ಳಬಹುದೇ ?" ಎಂದು ಕೇಳಿದನು.



ಮಾಣಿಕ್ಯವರ್ಮನು ಮಂದಹಾಸಬೀರುತ್ತ," ನನ್ನ ಪ್ರಾಣ ಮಿತ್ರನಾದ ನಿನಗೆ ಈ ವಿಷಯ ಮೊದಲೇ ತಿಳಿಸಬೇಕಾಗಿತ್ತು. ಹೋಗಲಿ, ಈಗ ತಿಳಿಸುತ್ತೇನೆ. ವಿರಿಂಚಿ ಪಟ್ಟಣದಲ್ಲಿರುವ ಸ್ವರ್ಣ ಕುಂತಲನೆಂಬ ಕವಿಯನ್ನು ಸತ್ಕರಿಸಬೇಕೆಂದು ನಿಶ್ಚಯಿಸಿದ್ದೇನೆ" ಎಂದನು.

ಗಂಗಾಧರ ಮಿಶ್ರನು ಒಂದೆರಡು ಕ್ಷಣಗಳವರೆಗೆ ಸುಮ್ಮನಿದ್ದು. "ಪ್ರಭೂ, ಈ ಸತ್ಕಾರವು ನನಗೇ ಲಭಿಸುವುದೆಂದು ನಗರದಲ್ಲೆಲ್ಲರೂ ನಂಬಿಕೊಂಡಿದ್ದಾರೆ. ನಾನು ತಮ್ಮ ನಿರ್ಣಯವನ್ನು ಪ್ರಶ್ನಿಸುವವನೆಂದು ತಿಳಿಯಬಾರದು. ತಮ್ಮಲ್ಲಿ ನನಗಿರುವ ಸಲಿಗೆಯಿಂದ ಕೇಳುತ್ತೇನೆ. ಈ ಸತ್ಕಾರವು ನನಗೆ ನಡೆಯದಿರುವ ಕಾರಣವನ್ನು ತಿಳಿದುಕೊಳ್ಳಬಹುದೇ ?" ಎಂದು ಕೇಳಿದನು.

ಅದನ್ನು ಕೇಳಿ ಮಾಣಿಕ್ಯವರ್ಮ ರಾಜನು ಗಟ್ಟಿಯಾಗಿ ನಕ್ಕು, "ನಾನು ಒಬ್ಬ ಕವಿಯ ವೈಯಕ್ತಿಕ ಪ್ರತಿಭೆಯನ್ನು ಮತ್ತೊಬ್ಬ ಕವಿಯೊಂದಿಗೆ ಹೋಲಿಸಿ ಈ ನಿಶ್ಚಯಕ್ಕೆ ಬರಲಿಲ್ಲ. ನೀನು ನನ್ನ ದೃಷ್ಟಿಯಲ್ಲಿ ಎಂದೆಂದಿಗೂ ಮಹಾಕವಿಯೇ. ನನಗೆ ಈ ನಡುವೆ ಸ್ವರ್ಣಕುಂತಲ ಕವಿ ಬರೆದ ಕಾವ್ಯಗಳನ್ನು ಓದುವ ಅವಕಾಶ ದೊರಕಿತು. ಅವನು ಪ್ರತಿಭಾಶಾಲಿಯಾದ ಕಾವ್ಯಕರ್ತನು. ಅಂತಹವನು ರಾಜಾಶ್ರಯವನ್ನು ಕೇಳಲು ಬಾರದೆ, ಯಾವುದೋ ಒಂದು ಮೂಲೆಯಲ್ಲಿದ್ದುಕೊಂಡು ಕಾಲ ಕಳೆಯುತ್ತಿದ್ದಾನೆ. ಎಲೆ ಮರೆಯ ಕಾಯಿಯಂತಿರುವ ಅಂತಹವನನ್ನು ಸನ್ಮಾನಿಸುವುದು ನನ್ನ ಬಾಧ್ಯತೆ ಅಂದುಕೊಂಡೆನು. ನನ್ನ ಮನಃಸಾಕ್ಷಿಯೂ ಒಪ್ಪಿದೆ" ಎಂದನು.

ಗಂಗಾಧರ ಮಿಶ್ರನು ಏನೋ ಹೇಳಲು ನೋಡುವಾಗ, ಒಬ್ಬ ಭಟನು ಅಲ್ಲಿಗೆ ಬಂದು, "ಮಹಾಪ್ರಭೂ, ವಿರಿಂಚಿ ಪಟ್ಟಣದಿಂದ ಸ್ವರ್ಣಕುಂತಲನೆಂಬವನು ತಮ್ಮ ದರ್ಶನವನ್ನು ಕೇಳುತ್ತಿದ್ದಾನೆ" ಎಂದನು.

ಕೂಡಲೇ ಗಂಗಾಧರ ಮಿಶ್ರನು, "ನೋಡಿದಿರಾ ಪ್ರಭೂ, ಯಾವ ಅಗ್ರಹಾರಗಳೋ ಲಭಿಸಲಿದೆ ಎಂದು ತಿಳಿದ ಕೂಡಲೇ ಆ ಕವಿ ಎಷ್ಟು ಶೀಘ್ರವಾಗಿ ಇಲ್ಲಿಗೆ ಬಂದಿದ್ದಾನೆ !" ಎಂದನು ಅವಹೇಳನೆಯ ಭಾವದಲ್ಲಿ.

ಮಾಣಿಕ್ಯವರ್ಮನು ಸ್ವರ್ಣಕುಂತಲನನ್ನು ಒಳಗೆ ಕಳುಹಿಸುವಂತೆ ಭಟನಿಗೆ ಹೇಳಿದನು. ಅವನು ಬಂದ ಕೂಡಲೇ ರಾಜನು, "ನೀವು ಈಗಲೇ ಇಷ್ಟು ಅವಸರವಾಗಿ ಇಷ್ಟು ದೂರ ಪ್ರಯಾಣ ಮಾಡಿ

ಬರುವ ಅಗತ್ಯವೇನಿತ್ತು ? ಸನ್ಮಾನಕ್ಕೆ ಇನ್ನೂ ಹದಿನೈದು ದಿನಗಳಿವೆಯಷ್ಟೆ ? ಆ ಸಂಗತಿಯನ್ನು ನಮ್ಮ ಭಟನು ನಿಮಗೆ ಸರಿಯಾಗಿ ಹೇಳಲಿಲ್ಲವೇನು ? " ಎಂದು ಕೇಳಿದನು.

ರಾಜನ ಪ್ರಶ್ನೆಯನ್ನು ಕೇಳಿ ಸ್ವರ್ಣಕುಂತಲನು ಬೆರಗಾಗಿ, "ನಾನು ಬಂದುದರಲ್ಲಿ ಏನೋ ಅಪಾರ್ಥವಾಗಿರುವ ಹಾಗಿದೆ. ಕ್ಷಮಿಸಬೇಕು. ನಾನು ಬಂದ ಕಾರಣ ಹೇಳಿದರೆ ತಪ್ಪಿಲ್ಲವೆಂದುಕೊಳ್ಳುತ್ತೇನೆ. ತಾವು ನನ್ನನ್ನು ಏತಕ್ಕೆ ಸನ್ಮಾನಿಸುವಿರೆಂಬುದನ್ನು ಮುಂದಾಗಿ ತಿಳಿದುಕೊಳ್ಳಬೇಕೆಂತಲೇ ಬಂದೆನು " ಎಂದನು.

ಅವನ ಮಾತು ಕೇಳಿ ಮಾಣಿಕ್ಯವರ್ಮನು ಆಶ್ಚರ್ಯಪಡುತ್ತ, "ಕವಿಗೆ ಸನ್ಮಾನವೆಂದು ಹೇಳಿರುವಾಗ ತನಗೇಕೆ ಸನ್ಮಾನ ಮಾಡಲಿಲ್ಲವೆಂದು ತಿಳಿಯುವವರಿರುವುದು ಸಹಜವೇ. ಆದರೆ ತನಗೇಕೆ ಸನ್ಮಾನ ಮಾಡುವಿರೆಂದು ಕೇಳುವ ನಿಮ್ಮಂಥವರಿರುವುದನ್ನು ನೋಡಿ ಏನು ಹೇಳಬೇಕೋ ಗೊತ್ತಾಗುವುದಿಲ್ಲ " ಎಂದನು.

ಆಗ ಸ್ವರ್ಣಕುಂತಲನು ವಿನಯದಿಂದ, "ಪ್ರಭೂ, ಗಂಗಾಧರ ಮಿಶ್ರರಂತಹ ಪ್ರಸಿದ್ಧ ಆಸ್ಥಾನಕವಿ ನಿಮ್ಮ ಆಸ್ಥಾನದಲ್ಲೇ ಇದ್ದಾರೆ. ನಾನೊಬ್ಬ ಅಪ್ರಸಿದ್ಧನು, ತಮಗೆ ಅಪರಿಚಿತನು. ಅಂತಹ ನನ್ನನ್ನು ಸನ್ಮಾನಿಸಬೇಕೆಂದಿದ್ದೀರಿ. ಇದಕ್ಕೆ ತಾವು ಹೇಳುವ ಕಾರಣವು ನನಗೆ ತೃಪ್ತಿಯಾಗುವ ಹಾಗೆ ಹೇಳಿದರೆ ಒಳ್ಳೆಯದಿತ್ತು. ಇಲ್ಲದಿದ್ದರೆ ಈ ಸನ್ಮಾನಕ್ಕೆ ನಾನು ಒಪ್ಪಿಕೊಳ್ಳಲಾರೆನು ಪ್ರಭೂ. ಮನ್ನಿಸಬೇಕು " ಎಂದನು.

ಮಾಣಿಕ್ಯವರ್ಮನು ಏನು ಹೇಳುವುದೆಂದು ಆಲೋಚಿಸುವಾಗ, ಗಂಗಾಧರ ಮಿಶ್ರನು ಸ್ವರ್ಣಕುಂತಲನನ್ನು ನೋಡಿ, "ನೀನು ಮಹಾಕವಿಯೆಂದು ವರ್ಣಿಸಿದ ಆ ಗಂಗಾಧರ ಮಿಶ್ರನು ನಾನೇ. ನಿಮ್ಮ ಕವಿತಾ ಪ್ರತಿಭೆಯನ್ನು ನಾನು ನೋಡಿಲ್ಲ. ಆದರೆ ಈಗ ಮಹಾರಾಜರ ಸಮಕ್ಷಮದಲ್ಲಿ ನೀವು ಹೊರಪಡಿಸಿದ ಅಭಿಪ್ರಾಯದ ಮೂಲಕ ನನಗಿಂತಲೂ ನೀವೇ ಘನವಂತರೆಂದು ತಿಳಿಯುತ್ತದೆ. ಆದುದರಿಂದಲೇ ಈ ಸನ್ಮಾನಕ್ಕೆ ನೀವು ಅರ್ಹರಾಗಿದ್ದೀರಿ. ಮಹಾರಾಜರು ನಿಮ್ಮ ಕಾವ್ಯಗಳನ್ನು ನೋಡಿಯೇ ಹೀಗೆ ನಿಶ್ಚಯಿಸಿದ್ದಾರೆ. ಅವರ ನಿಶ್ಚಯ ಸರಿಯಾದುದೆಂದು ಈಗ ರುಜುವಾಗಿದೆ " ಎಂದನು.

ಗಂಗಾಧರ ಮಿಶ್ರನು ಹೇಳಿದುದನ್ನು ಕೇಳಿ ಮಾಣಿಕ್ಯವರ್ಮನಿಗೆ ಬಹಳ ಸಂತೋಷವಾಯಿತು.

ಅವನು ತನ್ನ ಜನ್ಮದಿನೋತ್ಸವದ ದಿನ, ವಿರಂಚಿ ಪಟ್ಟಣದ ಸ್ವರ್ಣಕುಂತಲನನ್ನೂ ಪ್ರತ್ಯೇಕವಾಗಿ ಗಂಗಾಧರ ಮಿಶ್ರನನ್ನೂ ಘನವಾಗಿ ಸತ್ಕರಿಸಿ ಸಂತೋಷಪಡಿಸಿದನು.



# ಶಿಂಬುಕೋಟೆ



## ೧೩

[ ಚಂದ್ರವರ್ಮನೂ ಕಾಪಾಲಿನಿಯೂ ಶಂಬಿನ ಮಂತ್ರಗೃಹವಿರುವ ಬೆಟ್ಟವನ್ನು ಹತ್ತಿದರು. ಅಲ್ಲಿ ಕಾಪಾಲಿನಿಗಾಗಿ ಚಂದ್ರವರ್ಮನೂ ಕಾಲಕೇತುವೂ ಕೂಡಿ ಚಿಕ್ಕದೊಂದು ಮನೆಯನ್ನು ಕಟ್ಟಿದರು. ಮರುದಿನ ಬೆಳಗ್ಗೆ ಚಂದ್ರವರ್ಮನು ಅರಣ್ಯದೊಳಗೆ ಪ್ರವೇಶಿಸಿದನು. ಅಲ್ಲಿ ಅವನಿಗೊಂದು ಕಬ್ಬಿಣದ ಸಂಕಲೆ ದೊರಕಿತು. ಆಗಲೇ ದೆವ್ವದಂತಹ ನಾಯಿಯೊಂದು ಭಯಂಕರವಾಗಿ ಬೊಗಳುತ್ತಾ ಅವನ ಕಡೆಗೆ ಬಂತು. — ಮುಂದೆ ಓದಿರಿ ]

**ಆ** ದೈತ್ಯನಾಯಿ ಭಯಂಕರವಾದ ತನ್ನ ಕೆಂಬಾಯಿ ತೆರೆದು ಮೊನಚು ಹಲ್ಲುಗಳನ್ನು ತೋರಿಸುತ್ತ ಚಂದ್ರವರ್ಮನ ಕುತ್ತಿಗೆಯನ್ನೇ ಅಮುಕಿ ಹಿಡಿಯುವಂತೆ ಅಷ್ಟು ದೂರದಿಂದ ಛಂಗನೆ ಹಾರಿತು. ಅಷ್ಟರೊಳಗೆ ಚಂದ್ರವರ್ಮನು ತನ್ನ ಕತ್ತಿಯ ಮೊನೆಯಿಂದ ಅದರ ಎದೆಯನ್ನು ತಿವಿಯಲು ತಲೆಬಾಗಿ ಮುಂದಡಿ ತೆಗೆದನು. ಅದೇ ಸಮಯದಲ್ಲಿ ಅವನ ಎಡಗೈಯಲ್ಲಿದ್ದ ಕಬ್ಬಿಣದ ಸಂಕಲೆ ಛಳ್ಳೆಂದು ಆ ದೈತ್ಯನಾಯಿಯ ತಲೆಯ ಮೇಲೆ ಬಲವಾಗಿ ಬೀಸಿ ಬಿತ್ತು. ಆದರಿಂದಾಗಿ ಮೇಲೆ ಹಾರಿದ ಆ ನಾಯಿ ಕರ್ಕಶ ಸ್ವರದಿಂದ ಅರಚುತ್ತಾ ಒಂದಷ್ಟು ದೂರ ಆಚೆಯ ಬದಿಯಲ್ಲಿ ಬೊತ್ತೆಂದು ಅಂಗಾತ ಬಿದ್ದುಬಿಟ್ಟಿತು. ಬಿದ್ದ ನಾಯಿ ನಾಲ್ಕಾರು ಹೊರಳು ಹಾಕಿ ಎದ್ದು ನಿಂತಿತು.

ಚಂದ್ರವರ್ಮನು ಮಿಂಚಿನ ವೇಗದಲ್ಲಿ ತಿರುಗಿ, ಭೀಕರವಾಗಿ ಅರಚುವ ದೈತ್ಯನಾಯಿಯನ್ನು ಹತಮಾಡುವ ತವಕದಲ್ಲಿ ಅದರ ಹತ್ತಿರ ಧುಮುಕಿದನು. ಅದು ನಿಂತಲ್ಲೇ ಚಂದ್ರವರ್ಮನ ಕೈಯಲ್ಲಿರುವ ಕಬ್ಬಿಣದ ಸಂಕಲೆಯನ್ನೇ ಕ್ಷಣಕಾಲ ದಿಟ್ಟಿಸಿ ಹಿಂದಿರುಗಿ ಬಾಲಕಚ್ಚೆ ಕಟ್ಟಿಕೊಂಡು ಹೋದ



ಗಳ ಹತ್ತಿರಕ್ಕೆ ಓಡಿ, ಅಲ್ಲಿ ಅವನ ಕಡೆಗೆ ನೋಡುತ್ತ ಬಾಲವಾಡಿಸಿಕೊಂಡು ನಿಂತಿತು. ಅದರ ತೆರೆದ ಬಾಯಿಯೊಳಗಿನಿಂದ ಕಯಿಂ, ಕುಯಿಂ - ಎಂಬ ದೀನಧ್ವನಿಯೂ ಹೊರಡುತಿತ್ತು. ಅದರ ಭೀಕರತೆ ಏಕೋ ಅಡಗಿಹೋಗಿತ್ತು.

ತನ್ನ ಮೇಲೆ ದೆವ್ವದಂತೆ ಮುಗಿಬಿದ್ದ ಆ ರಕ್ಕಸ ನಾಯಿಯಲ್ಲಿ ಥಕ್ಕನೆ ಬಂದ ಮಾರ್ಪಾಡನ್ನು ನೋಡಿ ಚಂದ್ರವರ್ಮನಿಗೆ ಬಹಳ ಆಶ್ಚರ್ಯವಾಯಿತು. ಅವನು ತನ್ನ ಕೈಯಲ್ಲಿರುವ ಕಬ್ಬಿಣದ ಸಂಕಲೆಯ ಕಡೆಗೊಮ್ಮೆ ನೋಡಿ, ಅದನ್ನು ಆ ನಾಯಿ ನಿಂತಿರುವಲ್ಲಿ ಬೀಳುವಂತೆ ಬೀಸಿ ಹಾಕಿದನು. ಆ ದೈತ್ಯನಾಯಿ ಆ ಸಂಕಲೆಯನ್ನು ಒಮ್ಮೆ ಮೂಸಿ ನೋಡಿ, ಆಮೇಲೆ ಅದನ್ನು ಬಾಯಿಯಲ್ಲಿ ಕಚ್ಚಿಕೊಂಡು ಚಂದ್ರವರ್ಮನ ಹತ್ತಿರ ಬಂದು ಬಹಳ ವಿಧೇಯತೆಯಿಂದ ಬಾಲವಾಡಿಸುತ್ತ ನಿಂತಿತು. ಈ ಸಂಘಟನೆಯನ್ನು ನೋಡುತ್ತಿದ್ದ ಚಂದ್ರವರ್ಮನಿಗೆ ಆ ಕಬ್ಬಿಣದ ಸಂಕಲೆಯಲ್ಲಿ ಏನೋ ಪ್ರಭಾವವಿರುವಂತೆ ಅರ್ಥವಾಯಿತು. ಅವನು ಆ ಸಂಕಲೆಯನ್ನು ನಾಯಿಯ ಬಾಯಿಯಿಂದ ತೆಗೆದುಕೊಂಡು, ಅದರ ಒಂದು ಬದಿಯನ್ನು ವಿಧೇಯವಾಗಿ ನಿಂತ ನಾಯಿಯ ಕೊರಳಿಗೆ ತನ್ನ ನಾಯಿಗೆ ಬಿಗಿಯುವ ಹಾಗೆ ಸುತ್ತಿ ಬಿಗಿದನು, ಅದರ ಇನ್ನೊಂದು ಕೊನೆ ಅವನ ಕೈಯಲ್ಲಿತ್ತು.

ಆ ನಾಯಿ ಒಂದುಸಾರಿ ಸುತ್ತಲೂ ನೋಡಿ, ಆಮೇಲೆ ದೊಡ್ಡದನಿಯಿಂದ ಬೊಗಳುತ್ತ ಪೊದರುಗಳ ಕಡೆಗೆ ಅವನನ್ನು ಎಳೆಯತೊಡಗಿತು. ಅದು ತನ್ನನ್ನು ಎಲ್ಲಿಗೋ ಕರೆದುಕೊಂಡು ಹೋಗಲು ನೋಡುತ್ತದೆಂದು ಚಂದ್ರವರ್ಮನು ಅರ್ಥಮಾಡಿಕೊಂಡು, ಧೈರ್ಯದಿಂದ ಅದರ ಹಿಂದೆ ನಡೆಯತೊಡಗಿದನು. ಆಗ ಆ ನಾಯಿ ಚಂದ್ರವರ್ಮನಿಗೆ ಶುನಕರೂಪದ ರಾಕ್ಷಸನಲ್ಲವೆಂದೂ, ಅದೊಂದು ಅರಣ್ಯಜಾತಿಯ ಸಾಧಾರಣ ನಾಯಿಯೇ ಎಂದೂ ತೋರಿತು. ಈ ಅರಣ್ಯದಲ್ಲಿ ಯಾರೋ ಅದನ್ನು ಸಾಕುತ್ತಾರೆ. ಈ ಸಂಕಲೆ ಅದರದೇ ಇರಬೇಕು ಎಂದುಕೊಂಡನು.

ನಾಯಿ ಅವನನ್ನು ಕರೆದುಕೊಂಡು ಮುಳ್ಳು ಪೊದರುಗಳ ಮಧ್ಯದಿಂದಾಗಿ ಹೋಗಿ ಸ್ವಲ್ಪ ದೂರದಲ್ಲಿರುವ ಗುಡ್ಡದ ಒಂದು ದಿಣ್ಣೆಯ ಮೇಲೆ ಒಯ್ದಿತು. ಆ ದಿಣ್ಣೆಯಾಚೆಗಿನ ಹಳ್ಳದಲ್ಲಿ ಒಂದು ಬೆಟ್ಟದತೊರೆ ಸುತ್ತಿ ಬಳಸಿ ಹರಿಯುತ್ತಿದ್ದಿತು. ಆ ತೊರೆಯ ಬದಿಯಲ್ಲಿ ಒಂದು ಗುಡಿಸಲಿರುವುದನ್ನು ಚಂದ್ರವರ್ಮನು ನೋಡಿದನು. ಆ ಗುಡಿಸಲಿನಲ್ಲಿ ಈ ನಾಯಿಯ ಯಜಮಾನನಿರಬೇಕೆಂದು, ಈ ನಾಯಿ ತನ್ನನ್ನು ಅವನ ಬಳಿಗೆ ಕರೆದೊಯ್ಯುತ್ತದೆಂದು ಚಂದ್ರವರ್ಮನು ಭಾವಿಸಿದನು. ಕೂಡಲೇ ಅವನು ತನ್ನ ಕೈಯಲ್ಲಿರುವ ಸಂಕಲೆಯ ಉಳಿದೆಲ್ಲ ಭಾಗವನ್ನೂ ನಾಯಿಯ ಕೊರಳಿಗೇ ಸುತ್ತಿ, ಅದರ

ಹಿಂದೆಯೇ ದಿಣ್ಣೆಯನ್ನಿಳಿದು ತೊರೆಯ ಬದಿಯಲ್ಲೇ ನಡೆಯುತ್ತ ಗುಡಿಸಲನ್ನು ಸಮೀಪಿಸಿದನು. ಗುಡಿಸಲಿನೊಳಗೆ ಯಾರಿರುವರೋ ?

ಇವರ ನಡಿಗೆಯ ಶಬ್ದವನ್ನು ಕೇಳಿಯಾದರೂ ಆ ಗುಡಿಸಲಿನೊಳಗಿನಿಂದ ಯಾರೂ ಹೊರಗೆ ಬರಲಿಲ್ಲ. ನಾಯಿ ದೊಡ್ಡದನಿಯಿಂದ ಬೊಗಳುತ್ತಾ ಗುಡಿಸಲಿನೊಳಗೆ ಹೋಗಿ, ಮತ್ತೆ ಹೊರಗೆ ಬಂದು ಸುತ್ತಲೂ ತಿರುಗಿ ಅಚೆಗೂ ಈಚೆಗೂ ನೋಡತೊಡಗಿತು. ಈ ಗುಡಿಸಲಿನೊಳಗೆ ಎಂತಹ ವ್ಯಕ್ತಿ ವಾಸಮಾಡುವನೋ ಎಂದು ಅನುಮಾನಿಸಿಕೊಂಡು ಚಂದ್ರವರ್ಮನು ತುಂಬ ಎಚ್ಚರಿಕೆಯಿಂದ ಗುಡಿಸಲಿನೊಳಗೆ ಪ್ರವೇಶಿಸಿದನು. ಒಳಗೆ ಯಾರೂ ಇರಲಿಲ್ಲ. ಒಂದು ಮೂಲೆಯಲ್ಲಿ ಒಂದು ಹಗ್ಗದ ಮಂಚವಿದ್ದಿತು. ಮತ್ತೊಂದು ಗೋಡೆಯ ಬದಿಯಲ್ಲಿ ಒಂದು ಸಣ್ಣ ಒಲೆಯೂ ಮೂರು ಗಡಿಗೆಗಳೂ, ಕೆಲವು ಪುಟ್ಟ ಮಣ್ಣಿನ ಪಾತ್ರೆಗಳೂ ಇದ್ದುವು. ಮನೆಯ ಸೂರಿಗೆ ಕಟ್ಟಿದ್ದ ಒಂದು ಹಗ್ಗದಲ್ಲಿ ಒಂದು ಕಂಬಳಿಯೂ, ಹರಿದ ಕೆಲವು ಬಟ್ಟೆಗಳೂ ಇದ್ದುವು. ಹೆಂಗುಸರು ಇರುವಂತಹ ಯಾವ ವಸ್ತುಗಳೂ ಕಾಣಿಸಲಿಲ್ಲ.

ಈ ಗುಡಿಸಲಿನಲ್ಲಿ ಯಾವನೋ ಬಡವನು ವಾಸಮಾಡುತ್ತಾನೆಂದು ಚಂದ್ರವರ್ಮನಿಗೆ ಗೊತ್ತಾಯಿತು. ಆಗಲೇ ಅವನಿಗೊಂದು ಅನುಮಾನವೂ ಬಂತು. ಇಷ್ಟೊಂದು ಭಯಂಕರವಾದ ಕಾಡಿನ ನಡುವಿನಲ್ಲಿ ಆ ಬಡವನಿಗೆ ಕಾಲ ಕಳೆಯಬೇಕಾದ ಅಗತ್ಯವೇಕೆ ಬಂತು ? ಇವನು ಯಾವನೋ ಮತ್ತೊಬ್ಬ ಮಾಂತ್ರಿಕನಾಗಿರಬಹುದೆ ? ಅವನ ನಾಯಿ ಕೂಡಾ ವಿಲಕ್ಷಣವಾಗಿಯೇ ಇದೆ. ಮಂತ್ರಕ್ಕೆ ಸಂಬಂಧಿಸಿದ ವಸ್ತುಗಳು ಇಲ್ಲೆಲ್ಲಾದರೂ ಇವೆಯೆ ?

ಹೀಗೆ ಚಂದ್ರವರ್ಮನಿಗೆ ಅನುಮಾನವಾದ ಕೂಡಲೇ, ಅವನು ಬೇಗನೆ ಮುಂದೆ ಹೋಗಿ



ಒಲೆಯ ಹತ್ತಿರವಿರುವ ಮಡಿಕೆಗಳನ್ನು ಪರೀಕ್ಷೆ ಮಾಡಿ ನೋಡತೊಡಗಿದನು. ಈ ಗುಡಿಸಲಿನಲ್ಲಿರುವವನು ನರಮಾಂಸ ಭಕ್ಷಕನಾದರೆ, ಮಡಿಕೆಗಳಲ್ಲಿ ಮಾನವಾಸ್ಥಿಕೆಗಳು ಇರಬಹುದಷ್ಟೆ ? ಅದರ ಕುರುಹುಗಳು ಇರಬಹುದೆ ?

ಚಂದ್ರವರ್ಮನು ಹಾಗೆ ಆಲೋಚಿಸುತ್ತ ಪರೀಕ್ಷಿಸುವಾಗ, ಹಠಾತ್ತಾಗಿ ಹಿಂದಿನಿಂದ ಒಂದು ಎಚ್ಚರಿಕೆಯ ಧ್ವನಿ ಕೇಳಿತು. "ಹೇ ! ಇದ್ದಲ್ಲಿಂದ ಕದಲದೆ ಹಾಗೇ ಇರು ! ಕದಲಿದೆಯೋ...ನಿನ್ನ ಬೆನ್ನಿಗೆ ಈಟಿಯೇಟು ನುಗ್ಗುತ್ತೆ ! ಹಿಂದಿರುಗಿ ನೋಡದೆಯೇ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಬೇಕು !" ಗೊಗ್ಗರ ದನಿಯ ಗರ್ಜನೆಯಂತಿತ್ತು ಆ ಸ್ವರ.

ಚಂದ್ರವರ್ಮನಿಗೆ ಸರ್ವಾಂಗವೂ ಬೆವತುಕೊಂಡಿತು. ಎಂತಹ ಶತ್ರು ತನ್ನ ಹಿಂದೆ ಇದ್ದಾನೆಂಬುದನ್ನು ನೋಡುವ ಅವಕಾಶವೂ ಇಲ್ಲ.

ಬಹುಶಃ ತನ್ನ ಹಿಂದೆ ನಿಂತಿರುವ ಆ ಶತ್ರು ತನ್ನ ಬೆನ್ನಿಗೆ ಮೊನಚಾದ ಈಟಿಯನ್ನು ಗುರಿ ಹಿಡಿದು ನಿಂತಿರಬೇಕು. ಆದುದರಿಂದ ಹಿಂದಿರುಗಿ ನೋಡಲು ಪ್ರಯತ್ನಿಸುವುದು ಕೂಡಾ ವ್ಯರ್ಥವೇ. ಉತ್ತರ ಮಾತ್ರ ಹೇಳುವುದೇ ಒಳ್ಳೆಯದು.

"ನಾನು ನಿನಗೆ ಶತ್ರುವಲ್ಲ. ಮಿತ್ರನೇ. ನನ್ನ ಮುಖ ನೋಡಿದರೆ ಆ ಸಂಗತಿ ನಿನಗೇ ತಿಳಿಯುತ್ತದೆ. ನಿನ್ನ ಅಪ್ಪಣೆ ಇದ್ದರೆ ತಿರುಗುತ್ತೇನೆ" ಎಂದನು ಚಂದ್ರವರ್ಮ ಭಯವನ್ನು ಸ್ವಲ್ಪವೂ ತೋರಿಸಿಕೊಳ್ಳದೆ.

"ನೀನೋ ? ನನಗೆ ಮಿತ್ರನೆ ?...ಛೀ !" ಎಂದು ತುಚ್ಛೀಕರಿಸುವಂತೆ ಹೇಳಿದನು ಹಿಂದಿರುವ ವ್ಯಕ್ತಿ. ಮತ್ತೊಂದು ಕ್ಷಣದಲ್ಲಿ ಆ ವ್ಯಕ್ತಿ "ನಿನ್ನೊಂದಿಗೆ ಬಂದ ರಾಜಭಟರು ಎಲ್ಲಿದ್ದಾರೆ ?" ಎಂದು ಪ್ರಶ್ನೆ ಮಾಡಿದನು.

"ರಾಜಭಟರೇ ?" ಎಂದು ಚಂದ್ರವರ್ಮನು ಆಶ್ಚರ್ಯದಿಂದ ಹೇಳಿ, "ನಾನು ಈ ಅರಣ್ಯದಲ್ಲಿ ಒಬ್ಬನೇ ತಿರುಗಿಕೊಂಡಿದ್ದೇನೆ. ದೈವಕೃಪೆಯಿಂದ ನಿನ್ನ ದೈತ್ಯನಾಯಿಗೆ ನಾನು ಆಹಾರವಾಗದಂತೆ, ನನ್ನನ್ನೊಂದು ಕಬ್ಬಿಣದ ಸಂಕಲೆ ಕಾಪಾಡಿತು. ಆ ನಾಯಿಯೇ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂತು ಹೊರತು ನಾನಾಗಿ ಇಲ್ಲಿಗೆ ಬಂದವನಲ್ಲ" ಎಂದನು ಚಂದ್ರವರ್ಮ.

"ಆ ಕಬ್ಬಿಣದ ಸಂಕಲೆ ನಿನ್ನ ಪ್ರಾಣವನ್ನು ಕಾಪಾಡಿತೆಂಬುದರಲ್ಲಿ ಸಂದೇಹವಿಲ್ಲ, ನಿಜ. ಆ ಸಂಕಲೆಯನ್ನೇ ನನ್ನ ಮಗ ನಾಯಿಯ ಕೊರಳಿಗೆ ಕಟ್ಟಿ ಕರೆದುಕೊಂಡು ಅರಣ್ಯದಲ್ಲಿ ತಿರುಗುತ್ತಿರುತ್ತಾನೆ. ಅವನನ್ನು ರಾಜಭಟರು ಹಿಡಿದುಕೊಂಡು ಹೋದಾಗ ಈ ಸಂಕಲೆ ಅರಣ್ಯದಲ್ಲಿ ಎಲ್ಲೋ ಬಿದ್ದು ಹೋಯಿತು. ಅದು ನಿನ್ನ ಕೈಯಲ್ಲಿರುವುದನ್ನು ನೋಡಿ ನೀನು ತನ್ನ ಯಜಮಾನನ ಮಿತ್ರನೆಂದು ಭಾವಿಸಿ ನಾಯಿ ನಿನ್ನನ್ನು ಕೊಲ್ಲದೆ ಇಲ್ಲಿಗೆ ತಂದು ಬಿಟ್ಟಿದೆ. ಈಗ ನನ್ನ ಮಗ ಬದುಕಿದ್ದಾನೋ ಇಲ್ಲವೋ ತಿಳಿದಿಲ್ಲ. ರಾಜನು ಅವನನ್ನು ಕೊಂದು ಹಾಕಿರಬಹುದೆ ? ನಿನಗೆ ತಿಳಿದಿದೆಯೇ ? ಮುಖ್ಯವಾಗಿ



ನನಗೆ ನನ್ನ ಮಗನ ಕ್ಷೇಮ ಸಮಾಚಾರ ತಿಳಿಯ ಬೇಕಾಗಿದೆ" ಎಂದು ಕೇಳಿದನು ಆ ವ್ಯಕ್ತಿ.

ಅವನ ಮಾತುಗಳೆಲ್ಲ ಚಂದ್ರವರ್ಮನಿಗೆ ಅಯೋಮಯವಾಗಿದ್ದಿತು. ಇವನಾವನೋ ತನ್ನನ್ನು ರಾಜಭಟನೆಂದುಕೊಂಡಿದ್ದಾನೆ. ಅವನ ಮಗನಿಗೆ ಬಂದ ದುರ್ಗತಿಗೆ ಕಾರಣರಾದವರಲ್ಲಿ ತಾನೊಬ್ಬ ನೆಂದು ಇವನು ಭಾವಿಸುತ್ತಾನೆ. ಈಗ ತನ್ನ ಬೆನ್ನಿಗೆ ಈಟಿಯ ಗುರಿ ಹಿಡಿದು ನಿಂತಿದ್ದಾನೆ. ಈ ಅಪಾಯ ದಿಂದ ಹೊರಬೀಳುವ ಉಪಾಯವೇನಪ್ಪಾ! ಓ ದೇವರೇ!

ಚಂದ್ರವರ್ಮನಿಗೆ ಥಕ್ಕನೆ ಒಂದು ಉಪಾಯವು ಮಿಂಚಿತು. ಅವನು ತನ್ನ ನಡುವಿನಲ್ಲಿ ನೇತಾಡುವ ಕತ್ತಿಯನ್ನು ತೋರಿಸುತ್ತ "ಅಯ್ಯಾ, ನೀನು ಯಾವನೋ ನನ್ನ ಮೇಲೆ ವೃಥಾ ಸಂದೇಹ ಪಡುತ್ತಿರುವ ಹಾಗೆ ಅರ್ಥವಾಗುತ್ತದೆ. ನಾನು ನಿನ್ನ ಮಗನನ್ನು ಹಿಡಿದುಕೊಂಡು ಹೋದ ರಾಜ ಭಟರಿಗೆ ಸೇರಿದವನು ಅಲ್ಲವೇ ಅಲ್ಲ. ಆ ರಾಜನು ಯಾರು ಏನೆಂಬುದೊಂದೂ ನನಗೆ ತಿಳಿಯದು. ನನ್ನ ಸೊಂಟದಲ್ಲಿ ನೇತಾಡುವ ಈ ಕತ್ತಿಯನ್ನು ನೀನು ತೆಗೆದುಕೋ. ನಾನು ನಿರಾಯುಧನಾಗು ತ್ತೇನೆ. ಮತ್ತೆ ನಿನಗೆ ನನ್ನ ಭಯವಿಲ್ಲ. ಆಮೇಲೆ ಎಲ್ಲಾ ಸಂಗತಿಯನ್ನೂ ನೆಮ್ಮದಿಯಾಗಿ ಮಾತಾಡಿ ಕೊಳ್ಳಬಹುದು" ಎಂದನು.

ಚಂದ್ರವರ್ಮನ ಮಾತು ಮುಗಿಯುವುದಕ್ಕೆ ಮೊದಲೇ ಆ ವ್ಯಕ್ತಿ, ಚಂದ್ರವರ್ಮನ ಸೊಂಟದಿಂದ ಕತ್ತಿಯನ್ನು ಸರಕ್ಕನೆ ಎತ್ತಿಕೊಂಡು, "ಹುಂ, ಈಗ ಹಿಂದಿರುಗು. ಏನಾದರೂ ಮೋಸಮಾಡಲು ಪ್ರಯತ್ನಿಸಿದರೆ ನಿನ್ನ ಜೀವ ನನ್ನ ಕೈಯಲ್ಲಿದೆ. ಮುದುಕನಾದರೂ ಸಾಮಾನ್ಯನೆಂದುಕೊಳ್ಳಬೇಡ! ನೋಡಿಕೋ!" ಎಂದನು ಕಠಿಣವಾಗಿ.

ಚಂದ್ರವರ್ಮನು ಬದುಕು ಬಡಜೀವವೇ ಎಂದುಕೊಂಡು, ಒಂದು ನೆಮ್ಮದಿಯ ನಿಟ್ಟುಸಿರು ಬಿಟ್ಟು, ಹಿಂದೆ ತಿರುಗಿ ನೋಡಿದನು. ಸುಮಾರು ಎಪ್ಪತ್ತು ವರ್ಷ ವಯಸ್ಸಾದ ವೃದ್ಧನಾಗಿದ್ದವನು





ಕಂಡುಬಂದನು. ಅವನ ತಲೆಕೂದಲೂ, ಗಡ್ಡ ಮೀಸೆಗಳೂ ನರೆತು ಬೆಳ್ಳಗಾಗಿದ್ದುವು. ಮುಖ ಕೂಡಾ ನಿರಿಗೆಗಳಿಂದ ತುಂಬಿದ್ದುವು. ಅವನು ಒಂದು ಕೈಯಲ್ಲಿ ದೊಡ್ಡ ಈಟಿಯನ್ನೂ, ಇನ್ನೊಂದು ಕೈಯಲ್ಲಿ ಚಂದ್ರವರ್ಮನ ಕತ್ತಿಯನ್ನೂ ಹಿಡಿದಿದ್ದನು. ಅವನ ಕಣ್ಣುಗಳು ಕೆಂಪಗೆ ಉರಿಯುವಂತಿದ್ದುವು.

"ನಾನು ರಾಜಭಟನಂತೂ ಅಲ್ಲ. ರಾಜ್ಯವನ್ನು ಕಳೆದುಕೊಂಡು ಕಾಡಿನ ಪಾಲಿಗೆಬಿದ್ದ ಒಂದಾನೊಂದು ದೇಶದ ರಾಜನು ನಾನು. ನೀವು ವಯಸ್ಸಿನಲ್ಲಿ ಬಹಳ ದೊಡ್ಡವರು. ನಿಮ್ಮ ಕುಮಾರನನ್ನು ಬಂಧಿಸಿ ಕರೆದೊಯ್ದ ರಾಜನು ಯಾರು ? ಯಾವ ದೇಶದವನು ? ಎಲ್ಲಿದೆ ಅವನ ಮನೆ ? " ಎಂದು ಕೇಳಿದನು ಚಂದ್ರವರ್ಮ.

"ನೀನು ಈಗ ಇಲ್ಲಿ ಯಾವ ರಾಜ್ಯದ ಎಲ್ಲೆಯಲ್ಲಿರುವಿಯೆಂಬುದು ಕೂಡಾ ನಿನಗೆ ತಿಳಿಯದೇನು ? " ಎಂದು ಮುದುಕನು ಅನುಮಾನ ತೀರದವನಂತೆ ಕೇಳಿದನು.

ತನಗೆ ಅದೇನೂ ತಿಳಿಯದೆಂಬಂತೆ ಚಂದ್ರವರ್ಮನು ತಲೆಯನ್ನು ಆಡಿಸಿದನು. ಮುದುಕನು ಚಂದ್ರವರ್ಮನನ್ನು ಒಂದು ನಿಮಿಷದ ವರೆಗೆ ಪರೀಕ್ಷಿಸುವಂತೆ ತದೇಕ ದೃಷ್ಟಿಯಿಂದ ನೋಡಿ, "ನೀನು ಹೇಳುವ ಮಾತುಗಳನ್ನೂ, ನಿನ್ನ ದುಸ್ತುಗಳನ್ನೂ ನೋಡಿದರೆ ನೀನು ಈ ಪ್ರಾಂತಕ್ಕೆ ಹೊಸಬನಾಗಿರುವಂತೆಯೇ ಕಾಣುತ್ತದೆ. ನಿಜವಾಗಿಯೂ ನೀನು ರಾಜ್ಯವನ್ನು ಕಳೆದುಕೊಂಡ, ಕಾಡುಪಾಲಾದವನಾಗಿದ್ದರೆ ನಾನು ನಿನಗೆ ಸಹಾಯ ಮಾಡುತ್ತೇನೆ. ಅದಕ್ಕೆ ಪ್ರತಿಯಾಗಿ ನೀನು ಕೂಡಾ ನನಗೆ ಸಹಾಯ ಮಾಡುತ್ತೇನೆಂದು ವಾಗ್ದಾನ ಮಾಡುವಿಯಾ ? " ಎಂದು ಕೇಳಿದನು.

"ನನ್ನಿಂದ ನಿಮಗೆ ಏನು ಸಹಾಯ ಬೇಕು ? " ಎಂದು ಚಂದ್ರವರ್ಮನು ಕೇಳಿದನು.

"ನನ್ನ ಮಗನನ್ನು ರುದ್ರಪುರದ ರಾಜನಾದ ಶಿವಸಿಂಹನು ಬಂಧಿಸಿ ತೆಗೆದುಕೊಂಡು ಹೋಗಿದ್ದಾನೆ. ನಾನು ಅವನ ಭಟರ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡು ಈ ಅರಣ್ಯದಲ್ಲಿ ತಿರುಗುತ್ತಿದ್ದೇನೆ. ರಾಜನೊಂದಿಗೆ ವಿರೋಧವಿಟ್ಟುಕೊಂಡು ಹೀಗೆ ಇನ್ನು ಹೆಚ್ಚುದಿನ ಬದುಕುವೆನೆಂಬ ಆಶೆ ನನಗಿಲ್ಲ. ಇಷ್ಟರೊಳಗೆ ರಾಜನು ನನ್ನ ಮಗನನ್ನು ಕೊಲ್ಲಿಸಿಬಿಟ್ಟಿದ್ದರೆ ನಾನು ಮಾಡುವಂಥಾದ್ದು ಏನೂ ಇಲ್ಲ. ಹಾಗೆ ನಡೆಯದೆ ನನ್ನ ಮಗನು ಬದುಕಿಯೇ ಇದ್ದಾನಾದರೆ, ನಾನು ಆ ರಾಜನೊಂದಿಗೆ ರಾಜೀ ಮಾಡಿಕೊಂಡು, ಕಂಚುಕೋಟೆಯ ಪ್ರಾಂತಕ್ಕೆ ಹೋಗುವ ದಾರಿ ತಿಳಿಸುವಂತಹ ಪಟವನ್ನು ಕೊಡಬೇಕೆಂದಿದ್ದೇನೆ " ಎಂದನು ಆ ಮುದುಕ.

"ಕಂಚುಕೋಟೆಯೋ ? " ಎಂದು ಚಂದ್ರವರ್ಮನು ಅತ್ಯಾಶ್ಚರ್ಯವನ್ನು ವ್ಯಕ್ತಪಡಿಸಿ,

"ನೀವು ಹೇಳಿದ ಕಂಚುಕೋಟೆಯ ಸಂಗತಿ, ನಾನು ಚಿಕ್ಕವನಾಗಿರುವಾಗ ದೊಡ್ಡವರು ಹೇಳಿಕೊಳ್ಳುತ್ತಿರುವುದನ್ನು ಕೇಳಿದ್ದೇನೆ. ಕಂಚುಕೋಟೆ ಪಶ್ಚಿಮ ಸಮುದ್ರ ಪ್ರಾಂತದಲ್ಲಿ ಎಲ್ಲಿಯೋ ಇದೆಯೆಂದು ಹೇಳುತ್ತಿದ್ದರು. ಅಲ್ಲಿಗೆ ಹೋಗುವ ದಾರಿ ತಿಳಿಸುವವರು ಯಾರೂ ಬದುಕಿಕೊಂಡಿಲ್ಲವೆಂದೂ ಹೇಳುತ್ತಿದ್ದರು. ಇಷ್ಟು ವರ್ಷಗಳ ಮೇಲೆ ಈಗ ನಿಮ್ಮ ಬಾಯಿಯಿಂದ ಅಲ್ಲಿಗೆ ಹೋಗುವ ದಾರಿಯ ಚಿತ್ರಪಟ ನಿಮ್ಮ ಹತ್ತಿರ ಇರುವುದನ್ನು ಕೇಳಿ ನನಗಾಗುವ ಆಶ್ಚರ್ಯಕ್ಕೆ ಮೇರೆ ಇಲ್ಲ!" ಎಂದನು ಚಂದ್ರವರ್ಮ.



"ಹೌದೌದು. ಆಶ್ಚರ್ಯವಾಗುವುದು ನಿಜವೇ" ಎಂದು ಮುದುಕನು ತಲೆತಗ್ಗಿಸಿ ಒಂದು ಕ್ಷಣ ಆಲೋಚಿಸುತ್ತ ಸುಮ್ಮನಿದ್ದು, ಆಮೇಲೆ ತಲೆಯೆತ್ತಿ ಚಂದ್ರವರ್ಮನ ಮುಖವನ್ನು ದಿಟ್ಟಿಸಿ ನೋಡುತ್ತ, "ಆ ಕಂಚುಕೋಟೆ ಎಲ್ಲಿರುವುದೆಂಬುದನ್ನು ತಿಳಿಯಲು ಪ್ರಯತ್ನಮಾಡಿ ಅನೇಕರು ಪ್ರಾಣ ಕಳೆದುಕೊಂಡ ಸಂಗತಿ ನನಗೆ ಗೊತ್ತಿದೆ. ಅದೆಲ್ಲಾ ನಿನಗೆ ಗೊತ್ತಿದೆಯೇನು?" ಎಂದು ಪ್ರಶ್ನಿಸಿದನು. ಚಂದ್ರವರ್ಮನೂ ಆ ಪ್ರಯತ್ನಕ್ಕೇ ಬಂದವನೇನೋ ಎಂಬ ಅನುಮಾನ ಅವನಿಗಿದ್ದಂತಿತ್ತು.

"ನಿಜನಿಜ. ನನ್ನ ಚಿಕ್ಕಂದಿನಲ್ಲಿ ದೊಡ್ಡವರು ಹಾಗೂ ಹೇಳಿಕೊಂಡಿದ್ದರು. ನಿನ್ನ ಮಾತಿನಿಂದ ಅದೆಲ್ಲ ನೆನಪಾಗುತ್ತಿದೆಯೇ ಹೊರತು, ನಾನು ಆ ಮಾತಿಗೆ ಲಕ್ಷ್ಯಕೊಟ್ಟಿಲ್ಲ" ಎಂದನು ಚಂದ್ರವರ್ಮ.

ಅದನ್ನು ಕೇಳಿ ಮುದುಕನು ನಗುವಿನ ನಿರಿಗೆಗಳನ್ನು ಅರಳಿಸಿ, "ಇಕೋ ನೋಡು, ನಿನಗೆ ಕಂಚುಕೋಟೆಯ ಸಂಗತಿ ಪೂರಾ ಗೊತ್ತಿದೆಯೆಂದು ನನಗೆ ಅನುಮಾನವಾಗಿದೆ. ನನ್ನ ಹತ್ತಿರ ಆ ಕಂಚುಕೋಟೆಗೆ ಹೋಗುವ ಮಾರ್ಗವನ್ನು ತೋರಿಸುವ ಚಿತ್ರಪಟವಿದೆಯೆಂದು ಹೇಳಿದೆನಷ್ಟೆ? ಅದನ್ನು ನನ್ನ ಪೂರ್ವಿಕರಲ್ಲೊಬ್ಬರು ಹೇಗೋ ಸಂಪಾದಿಸಿದ್ದಾರೆ. ಆದರ ಸಂಗತಿ ರುದ್ರಪುರದ ರಾಜ ಶಿವಸಿಂಹನ ಕಿವಿಗೆ ಬಿದ್ದಿದೆ. ಅದಕ್ಕಾಗಿ ಅವನು ನನ್ನನ್ನು ಹಿಡಿಯಲು ತನ್ನ ಭಟರನ್ನು ಕಳುಹಿಸಿದಾಗ ನಾನು ತಪ್ಪಿಸಿಕೊಂಡು ಇಲ್ಲಿಗೆ ಬಂದೆನು. ನನ್ನ ಮಗ ದೇವಲನು ಅವರ ಕೈಗೆ ಸಿಕ್ಕಿಕೊಂಡನು. ಕಂಚುಕೋಟೆಯಲ್ಲಿ ಸಿಗುವಂತಹ ಬೆಲೆಯಿಲ್ಲದ ರತ್ನರಾಶಿಗಳಲ್ಲಿ ನನಗೂ ಸ್ವಲ್ಪಭಾಗ ಕೊಡುವ ಹಾಗಿದ್ದರೆ ಆ ಚಿತ್ರಪಟವನ್ನು ನಾನು ರಾಜನಿಗೆ ತೋರಿಸಿಕೊಡಲು ಅಡ್ಡಿಯಿಲ್ಲ. ಇದಕ್ಕೆ ನೀನು ಮಧ್ಯವರ್ತಿಯಾಗಿದ್ದರೆ ಒಳ್ಳೆಯದು. ದೇವಲನನ್ನು ಬಿಡುಗಡೆ ಮಾಡಿಸಬೇಕು. ಇದಕ್ಕೆ ನೀನು ಸಹಾಯ ಮಾಡಿದರೆ ನನಗೆ ಸಿಗುವುದರಲ್ಲಿ ನಿನಗೂ ಸ್ವಲ್ಪ ಕೊಡುತ್ತೇನೆ. ಆ ಸ್ವಲ್ಪವೆಂಬುದೇ ಒಂದು ಬ್ರಹ್ಮಾಂಡದಷ್ಟು ಆದೀತು! ಆ ಧನದಿಂದ ನೀನು ಬೇಕಾದಷ್ಟು ಸೈನ್ಯವನ್ನು ಸಂಗ್ರಹಿಸಿಕೊಂಡು ಕಳೆದುಕೊಂಡ ನಿನ್ನ ರಾಜ್ಯವನ್ನು

ಮತ್ತೆ ಪಡೆಯಬಹುದು. ಏನು ಹೇಳುವಿ?" ಎಂದನು ಮುದುಕ ಆತುರದಿಂದ ನೋಡುತ್ತ.

ಮುದುಕನ ಮಾತುಗಳನ್ನೆಲ್ಲ ಮನಸ್ಸುಗೊಟ್ಟು ಕೇಳುತ್ತಿದ್ದ ಚಂದ್ರವರ್ಮನಿಗೆ ಮುದುಕನು ಸಾಮಾನ್ಯದವನಲ್ಲವೆಂದು ತಿಳಿದು ಹೋಯಿತು. ಯುಕ್ತಿಗಳನ್ನು ತೆಗೆಯುವುದರಲ್ಲಿಯೂ, ವ್ಯೂಹಗಳನ್ನು ಹೆಣೆಯುವುದರಲ್ಲಿಯೂ, ಇತರರನ್ನು ವಶಪಡಿಸುವುದರಲ್ಲಿಯೂ ಅವನು ಅತ್ಯಂತ ಪಾರಂಗತನಾದ ಅನುಭವಶಾಲಿಯೆಂದು ಚಂದ್ರವರ್ಮನು ಊಹಿಸಿದನು.

"ಅಯ್ಯಾ, ನೀವು ಹೇಳುವ ನಿಯಮಗಳಿಗೆ ನಾನು ಒಪ್ಪಿಕೊಳ್ಳುತ್ತೇನೆ. ಕಂಚುಕೋಟೆಗೆ ಹೋಗುವ ಮಾರ್ಗ ತೋರಿಸುವ ಆ ಚಿತ್ರಪಟವನ್ನು ತೋರಿಸಿ ನೋಡುವಾ" ಎಂದನು ಚಂದ್ರವರ್ಮ.

ಮುದುಕನು ತೃಪ್ತಿಯಿಂದ ಚಂದ್ರವರ್ಮನನ್ನು ನೋಡಿ, ಏನೋ ಹೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ, ಹೊರಗೆ ಏನೋ ಕಲಕಲರವವು ಕೇಳತೊಡಗಿತು. ಮುದುಕನು ಹಾರಿ ಓಡಿ ಬಾಗಿಲ ಹತ್ತಿರ ನಿಂತು ಹೊರಗೆ ಬಗ್ಗಿ ನೋಡಿ, "ಅದೋದೋ, ರಾಜಭಟರು ಈ ಕಡೆಗೇ ಬರುತ್ತಿದ್ದಾರೆ. ನನಗೂ ನನ್ನ ಮಗನಿಗೂ ಯಾವ ಕೇಡೂ ಮಾಡುವುದಿಲ್ಲವೆಂದು ಅವರು ಮಾತು ಕೊಟ್ಟರೆ ನಾನು ಅವರೊಂದಿಗೆ ಕೂಡಿ ಮಾತಾಡುತ್ತೇನೆ. ಕಂಚುಕೋಟೆಯಲ್ಲಿ ಸಿಗುವ ಧನದಲ್ಲಿ ನನಗೆ ಸಿಗುವ ಧನದ ಭಾಗವನ್ನೂ ಕೂಡಾ ನೀನು ಮಾತಾಡಿ ಅವರಿಂದ ವಾಗ್ದಾನ ಪಡೆಯಬೇಕು" ಎಂದು ಹೇಳಿದವನೇ ಗುಡಿಸಲಿನೊಳಗಿನಿಂದ ಹೊರಗೆ ಓಡಿ, ಮರಗಳ ಗುಂಪಿನೊಳಗೆ ನುಗ್ಗಿ ಮಾಯವಾಗಿ ಹೋದನು.

ಕಣ್ಣುಮುಚ್ಚಿ ಬಿಡಿಸುವುದರೊಳಗೆ ನಡೆದ ಈ ಘಟನೆಗಳನ್ನು ನೋಡಿ, ಚಂದ್ರವರ್ಮನು ತುಂಬ ಬೆರಗಾದನು. ಈ ಅಸಾಧ್ಯನಾದ ಮುದುಕನು ತನ್ನನ್ನು ಅಪಾಯದಲ್ಲಿ ಸಿಗಿಸಿ ಹಾಕಿ ಕಾಡಿನೊಳಗೆ ಓಡಿಹೋದನಲ್ಲ! ಈಗ ತಾನೇನು ಮಾಡಬೇಕು?

ಚಂದ್ರವರ್ಮನು ಏನು ಮಾಡಬೇಕೆಂದು ನಿಶ್ಚಯಕ್ಕೆ ಬರುವುದರೊಳಗೇ, ಕತ್ತಿ ಕಠಾರಿ ಮೊದಲಾದ ಆಯುಧಗಳನ್ನು ಧರಿಸಿದ ಭಟರು ಆ ಗುಡಿಸಲನ್ನು ಮುತ್ತಿಗೆ ಹಾಕಿಬಿಟ್ಟರು.

"ಯಾರು ಒಳಗೆ? ಬನ್ನಿ ಹೊರಗೆ, ಓಡಲು ನೋಡಿದರೆ ಈಟಿಗಳಿಗೆ ಬಲಿಯಾಗಬೇಕಾದೀತು!" ಎಂದು ರಾಜಭಟರು ಕೂಗಿ ಕೂಗಿ ಹೇಳಿದರು.

ಏನು ಬೇಕಾದರೂ ಆಗಲೆಂದುಕೊಂಡು ಚಂದ್ರವರ್ಮನು ಗುಡಿಸಲಿನೊಳಗಿನಿಂದ ಹೊರಗೆ ಬಂದು ನಿಂತನು.

—(ಇನ್ನೂ ಇದೆ)






# ನತ್ತೀರನ ಸೇವಕ

ಸಹಜವಾಗಿಯೇ ಮತ್ತೆ ಆ ಮರದ ಹತ್ತಿರ ಬಂದ ಶಠಗಾರನಾದ ರಾಜಾ ತ್ರಿವಿಕ್ರಮನು, ಮರಹತ್ತಿ ಕೊಂಬೆಯಲ್ಲಿ ನೇತಾಡುತ್ತಿರುವ ಬೇತಾಳಾವೇಶಿತವಾದ ಮಾನವ ಶವವನ್ನು ಕೆಳಕ್ಕಿಳಿಸಿ, ತನ್ನ ಹೆಗಲಿನ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದ ಬಾಯಿ ಮಾತು ಹೊರಡಿಸಲು ತೊಡಗಿ, "ಎಲೈ ಮಹಾರಾಜನೇ! ಇಷ್ಟೊಂದು ಭಯಂಕರವಾದ ಕಾಳರಾತ್ರಿಯಲ್ಲಿ ನೀನು ಮಾಡುವ ಬಹು ಶ್ರಮದ ಸಾಹಸವನ್ನು ನೋಡುತ್ತಿದ್ದರೆ ನನಗೆ ನಿನ್ನ ಮೇಲೆ ದಯೆಯೂ ಬರುತ್ತದೆ, ಆಶ್ಚರ್ಯವೂ ಆಗುತ್ತದೆ. ರಾಜನಾದ ನಿನ್ನನ್ನು ಇಷ್ಟೊಂದು ಕಠಿಣ ಪರೀಕ್ಷೆಗೆ ಗುರಿ ಮಾಡುವ ಶಕ್ತಿಶಾಲಿ ಯಾರೂ ಇರಲಿಕ್ಕಿಲ್ಲವೆಂದೇ ಕಾಣುತ್ತದೆ. ನನ್ನ ಅನುಮಾನವೇನೆಂದರೆ ನಿನಗೆ ಪ್ರೇಮಪಾತ್ರನೋ, ಗೌರವನೀಯನೋ ಆದ ಒಬ್ಬನು ಹೇಳಿದ ಮಾತನ್ನು ನೀನು ಸರಿಯಾಗಿ ಅರ್ಥಮಾಡಿಕೊಂಡಿರಲಿಕ್ಕಿಲ್ಲವೆಂದು ತೋರುತ್ತದೆ. ಇಂತಹ ತಪ್ಪಿನಿಂದಲೇ ದೊಡ್ಡ ರಾಜಸತ್ಕಾರ

## ಬೇತಾಳ ಕಥೆಗಳು?...



ಹೊಂದುವಂತಹ ನಕ್ಕೀರನೆಂಬೊಬ್ಬ ಮಹಾಕವಿ ತನ್ನ ಆತ್ಮಗೌರವವನ್ನು ಕಳೆದುಕೊಳ್ಳಬೇಕಾಗಿ ಬಂತು. ನಿನಗೆ ಹಾಗೇನಾದರೂ ಆಗಬಾರದೆಂಬುದಕ್ಕಾಗಿ ಆತನ ಕಥೆಯನ್ನು ಹೇಳುತ್ತೇನೆ. ನಡೆಯುವ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಮಾಡಿತು :

ನಕ್ಕೀರನು ವಿಮಲಗಿರಿಯ ರಾಜಾಸ್ಥಾನದಲ್ಲಿ ಇರುವವನು. ರಾಜನಿಗೆ ಅವನ ಮೇಲೆ ಬಹಳ ಅಭಿಮಾನವಿದ್ದಿತು. ನಕ್ಕೀರನೊಂದಿಗೆ ಸಂಭಾಷಣೆ ಮಾಡದೆ ಒಂದು ದಿನ ಕೂಡಾ ಇರುವವನಲ್ಲ ಆ ರಾಜ. ನಕ್ಕೀರನೊಂದಿಗೆ ಮಾತಾಡಿದರೆ ಒಂದು ಹೊಸ ಭಾವನೆ ಅರಳುತ್ತಿದ್ದಿತು.

ನಕ್ಕೀರನಲ್ಲಿರುವ ಪ್ರತ್ಯೇಕತೆ ಏನೆಂದರೆ, ಅವನು ಯಾರೊಂದಿಗೆ ಮಾತಾಡಿದರೂ ಅದು ಕವಿತ್ವದ ಹಾಗೆಯೇ ಇರುತ್ತಿತ್ತು. ಮನೆಯಲ್ಲಿ ಹೆಂಡತಿ ಮಕ್ಕಳೊಂದಿಗಾಗಲಿ, ಸೇವಕರೊಂದಿಗಾಗಲಿ, ಹೊರಗೆ ಅಂಗಡಿಗಳಲ್ಲಾಗಲಿ ಅವನು ಕವಿತ್ವದ ಧೋರಣೆಯಲ್ಲಿಯೇ ಮಾತಾಡುವನು. ಅದು ಸುಲಭವಾಗಿ ಅರ್ಥವಾಗುವುದರೊಂದಿಗೆ, ಸಂತೋಷವನ್ನೂ ತುಂಬಿಸುವಂತಹುದು. ಅದರಿಂದಾಗಿ ನಗರದಲ್ಲಿ ಅವನ ಧೋರಣೆ ಬಹಳವಾಗಿ ಪ್ರಚಾರವಾಯಿತು.

ಎಲ್ಲಿಯಾದರೂ, ಯಾರಾದರೂ, ಯಾರೊಂದಿಗಾದರೂ ಕವಿತ್ವಧೋರಣೆಯಲ್ಲಿ ಮಾತಾಡಲು ಪ್ರಯತ್ನಪಟ್ಟರೆ, "ಬರೆ ಹಾಕಿಕೊಂಡ ಮಾತ್ರಕ್ಕೆ ನರಿ ಹುಲಿಯಾಗಲಾರದು. ಆ ಬಗೆಯ ಧೋರಣೆ ನಕ್ಕೀರನಿಗೇ ಸರಿ" ಎಂದು ಬಾಯಿಮುಚ್ಚಿಸಿಬಿಡುತ್ತಿದ್ದರು.

ನಕ್ಕೀರನ ಮನೆಯಲ್ಲಿ ಕೇಶವನೆಂಬ ಸೇವಕನಿದ್ದನು. ಅವನು ತುಂಬ ಸಾಹಿತ್ಯಾಭಿಲಾಷೆಯುಳ್ಳವನು. ನಕ್ಕೀರನ ಮಾತುಗಳನ್ನು ಕೇಳಲಿಕ್ಕಾಗಿಯೇ ಅವನು ಆ ಮನೆಯಲ್ಲಿ ಕೆಲಸಕ್ಕೆ ಸೇರಿದ್ದನು. ಅದಿಲ್ಲದಿರುತ್ತಿದ್ದರೆ ಅವನ ಚುರುಕುತನಕ್ಕೆ ಬೇರೆಲ್ಲಿಯಾದರೂ ಅವನಿಗೆ ಒಳ್ಳೆಯ ಸಂಬಳದ ಕೆಲಸ ದೊರಕುತ್ತಿತ್ತು. ತೀರಿಕೆ ಸಿಕ್ಕಾಗಲೆಲ್ಲಾ ಕೇಶವನು ಸಾಹಿತ್ಯಪಠನ ಮಾಡುತ್ತಾ ಇರುವನು. ನಕ್ಕೀರನ ಬಾಯಿಯಿಂದ ಹೊರಡುವ ಪ್ರತಿ ಮಾತನ್ನೂ ಅವನು ಪದೇ ಪದೇ ಮನನ ಮಾಡಿಕೊಂಡು, ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದನು. ತನಗೆ ಅರ್ಥವಾಗದೆ ಹೋದಲ್ಲಿ ನಕ್ಕೀರನನ್ನೇ ಕೇಳಿ ಅದರ ಅರ್ಥ ತಿಳಿದುಕೊಳ್ಳುತ್ತಿದ್ದನು. ನಕ್ಕೀರನು ಕೂಡಾ ಅವನ ಆಸಕ್ತಿಗೆ ಮುಗ್ಧನಾಗಿ ಮೆಚ್ಚಿಕೊಂಡು ಕೇಳಿದುದಕ್ಕೆಲ್ಲಾ ವಿವರಿಸಿ ಉತ್ತರ ಕೊಡುತ್ತಿದ್ದನು.

ಹೀಗೆ ಕ್ರಮಕ್ರಮವಾಗಿ ಕೇಶವನಿಗೆ ಸ್ವಲ್ಪಮಟ್ಟಿಗೆ ಕವಿತ್ವವು ಅಂಟಿಕೊಂಡಿತು. ಅವನು ಹೊರಗೆ ಹೋದಾಗ ತರಕಾರಿ ವ್ಯಾಪಾರಿಗಳೊಂದಿಗೆ, ಬೇರೆ ಬೇರೆ ಕೆಲಸಗಾರರೊಂದಿಗೆ ಕವಿತ್ವದಿಂದಲೇ

ಮಾತಾಡುತ್ತಿದ್ದನು. ಕೆಲವರು ಅವನ ಸಂಭಾಷಣೆಯ ಚಾತುರ್ಯವನ್ನು ಮೆಚ್ಚಿಕೊಂಡು "ಎಷ್ಟಾದರೂ ಇವನು ನಕ್ಕೀರರ ಮನೆಯ ಕೆಲಸದವನು ತಾನೇ ? ಕವಿತ್ವವು ಅಂಟದೆ ಸುಮ್ಮನೆ ಬಿಟ್ಟೀತೇ ? ಅದರ ಮೇಲೆ ಶ್ರದ್ಧೆಯೂ ಇದ್ದುಬಿಟ್ಟರೆ ಕೇಳಬೇಕೆ ? " ಎನ್ನುತ್ತಿದ್ದರು.



ಹೀಗಿರುವಾಗ ಒಂದು ದಿನ ಏನೋ ಅನಾರೋಗ್ಯದ ಕಾರಣದಿಂದಾಗಿ ನಕ್ಕೀರನು ರಾಜದರ್ಶನಕ್ಕೆ ಹೋಗಲಾಗಲಿಲ್ಲ. ರಾಜನು ತನಗಾಗಿ ಇದಿರು ನೋಡುತ್ತಿರುವನೆಂಬುದು ಗೊತ್ತಿದ್ದ ನಕ್ಕೀರನು ಕೇಶವನೊಂದಿಗೆ, "ಎಲೋ, ಕೇಶವಾ ! ಸ್ವಲ್ಪ ಅರಮನೆಯವರೆಗೆ ಹೋಗಿ ಮಹಾರಾಜರ ಹತ್ತಿರ ಈ ದಿನ ಚಕೋರಕ್ಕೆ ಅಮಾವಾಸ್ಯೆಯಾಯಿತೆಂದು ಹೇಳಿಬಾರಪ್ಪ " ಎಂದನು.

ಚಕೋರಪಕ್ಷಿ ಚಂದ್ರನಿಗಾಗಿ ಇದಿರು ನೋಡುತ್ತದೆಂದೂ, ಬೆಳುದಿಂಗಳನ್ನು ಅದು ಮೇಯುವುದೆಂದೂ ಕವಿಗಳು ಹೇಳುತ್ತಾರಲ್ಲವೆ ? ಇಲ್ಲಿ ನಕ್ಕೀರನು ಚಂದ್ರನಾಗಿ, ಆದಿನ ತಾನು ಬರಲಾರೆನಾದುದರಿಂದ ರಾಜನಿಗೆ ಬೇಕಾದ ಬೆಳುದಿಂಗಳು ದೊರೆಯಲಾರದೆಂಬುದನ್ನು ಕವಿತಾಧೋರಣೆಯಲ್ಲಿ ಹಾಗೆ ಹೇಳಿದ್ದನು. ಇದು ಕೂಡಲೇ ಕೇಶವನಿಗೆ ಅರ್ಥವಾಯಿತು. ಆದುದರಿಂದ ವಿವರಣೆ ಕೇಳದೆ ಸರಿಯೆಂದು ಹೊರಟನು.

ಅವನು ರಾಜನ ಹತ್ತಿರ ಹೋಗಿ, "ಪ್ರಭುಗಳೇ! ಈ ದೂತವಾಕ್ಯವನ್ನು ಲಾಲಿಸಬೇಕು ! ಓ ಚಕೋರವೇ ! ಈ ದಿನ ನಿನಗೆ ಅಮಾವಾಸ್ಯೆಯಾಗುವುದೆಂದು ಚಂದ್ರನು ನಿನಗೆ ಬಿನ್ನವಿಸಲು ಹೇಳಿದ್ದಾನೆ " ಎಂದು ಹೇಳಿದನು.

ಕೇಶವನು ನಕ್ಕೀರನ ಬಳಿಯಿಂದ ಬಂದನೆಂದು ರಾಜನಿಗೆ ಅರ್ಥವಾಯಿತು. ಅವನು ಕೂಡಲೇ, "ಇದನ್ನು ಕೇಳಿ ನನಗೆ ಬಹಳ ಸಂತೋಷವಾಯಿತೆಂದು ಚಂದ್ರನೊಂದಿಗೆ ಹೇಳು" ಎಂದನು. ಕೇಶವನು ಸರಿ ಎಂಬಂತೆ ತಲೆಯಾಡಿಸಿದನು. ಅದನ್ನು ನೋಡಿ ರಾಜನು "ಎಲೋ, ನನಗೆ ಏಕೆ ಸಂತೋಷವಾಗಿದೆ ಎಂಬುದು ನಿನಗೆ ಗೊತ್ತಾಗಿದೆಯೆ? ಅಥವಾ ಸುಮ್ಮನೆ ತಲೆಯಾಡಿಸಿದೆಯಾ ? " ಎಂದು ಕೇಳಿದನು.

"ಗೊತ್ತಾಗದೆ ಉಂಟೇ ಸ್ವಾಮೀ ? ತಾವು ಒಳ್ಳೆಯ ಸ್ವಾರ್ಥಿಗಳಾಗಿದ್ದೀರಿ " ಎಂದು ಸ್ವಲ್ಪವೂ ಶಂಕಿಸದೆ ಹೇಳಿದನು ಕೇಶವ.

ಅವನ ಉತ್ತರವನ್ನು ಕೇಳಿ ರಾಜನ ಮುಖವು ಕೆಂಪಗಾಯಿತು. ಅವನು ಕೇಶವನನ್ನು ನೋಡಿ, "ನಕ್ಕೀರನ ಹತ್ತಿರ ಕೆಲಸ ಮಾಡುವ ನಿನಗೆ ನನ್ನ ಮಾತುಗಳು ಅರ್ಥವಾಗುತ್ತವೆ ಅಂದುಕೊಂಡೆನು. ನಾನು ಸ್ವಾರ್ಥಿಯಾಗಿರುವೆನೆಂದು ತಪ್ಪಾಗಿ ಅರ್ಥ ಮಾಡಿಕೊಳ್ಳುವೆ ಎಂದು ನಾನು ಭಾವಿಸಲಿಲ್ಲ. ನನ್ನಲ್ಲಿರುವ ಸ್ವಾರ್ಥವೇನೆಂದು ಸರಿಯಾಗಿ ನೀನೀಗ



ಪ್ರದರ್ಶನ ಮಾಡಲು ನಿನಗೆ ಹೇಗೆ ಸಾಧ್ಯವಾಯಿತು ? " ಎಂದು ಕೇಳಿದನು.

"ಅವರು ಇವರಾಗುವಾಗ ನನ್ನದೇ ಮೇಲುಗೈ ತಾನೇ ? ಮತ್ತೆ ಭಯಪಡುವುದೇತಕ್ಕೆ ? " ಎಂದನು ಕೇಶವ.

ಅವನ ಮಾತು ರಾಜನಿಗೆ ಅರ್ಥವಾಗಲಿಲ್ಲ. "ಅವರು ಇವರಾಗುವುದೆಂದರೇನು ? ವಿವರವಾಗಿಯೇ ಹೇಳಿಬಿಡು " ಎಂದನು.

"ನ್ಯಾಯಕ್ಕೆ ತಾವು ರಾಜರು. ಆದರೆ ಈಗ ನನ್ನ ಯಜಮಾನರು ರಾಜರಾಗಿದ್ದಾರೆ. ಆದ್ದರಿಂದ ನನ್ನದೇ ಮೇಲುಗೈಯಾಗಿದೆ " ಎಂದನು ಕೇಶವ.

ರಾಜ ಎಂಬ ಶಬ್ದಕ್ಕೆ ಚಂದ್ರನೆಂದೂ ಅರ್ಥವಿದೆಯೆಂದು ಕೇಶವನಿಗೆ ಗೊತ್ತಿತ್ತು. ನಕ್ಕೀರನು ತಾನು ಚಂದ್ರನೆಂದು ಸುದ್ದಿಯಲ್ಲಿ ತಿಳಿಸಿದ್ದಾನಷ್ಟೆ ? ಇದೆಲ್ಲ ತಿಳಿದು ರಾಜನ ಸಿಟ್ಟು ಅಡಗಿತು.

ಹೇಳದೆ ಹೋದರೆ ನಿನ್ನನ್ನು ಈಗಿಂದೀಗಲೇ ಕಾರಾಗೃಹವಲ್ಲಿ ಹಾಕಿಸುತ್ತೇನೆ " ಎಂದನು.

ಆಗ ಕೇಶವನು ವಿನಯದಿಂದ, "ಪ್ರಭುಗಳು ಅಮಾವಾಸ್ಯೆಯನ್ನು ಕುರಿತು ಅಷ್ಟೇನೂ ಚಿಂತೆ ಮಾಡದೆ, ಇನ್ನು ಬರಲಿರುವುದು ಶುಕ್ಲಪಕ್ಷ ತಾನೇ, ಆಗ ಚಂದ್ರನ ಬೆಳುದಿಂಗಳು ದಿನದಿಂದ ದಿನಕ್ಕೆ ವೃದ್ಧಿಯಾಗುತ್ತಾ ಬರುತ್ತದೆಂದುಕೊಂಡು ಸಂತೋಷಿಸಿದ್ದಾರೆಂದು ಅರ್ಥಮಾಡಿಕೊಂಡು, ಅದಕ್ಕೇ ತಾವು ಸಂತೋಷವನ್ನು ಬಿಡದ ಸ್ವಾರ್ಥಿಗಳೆಂದು ಹೇಳಿದೆನು " ಎಂದನು.

ಇದನ್ನು ಕೇಳಿ ರಾಜನು ಸಂತೋಷದಿಂದ ಪ್ರಸನ್ನ ಮುಖದವನಾಗಿ "ಭಲೇ ! ನೀನು ನಿಜಕ್ಕೂ ನಕ್ಕೀರನಿಗೆ ತಕ್ಕವನೇ ಸರಿ. ನಿನ್ನ ಮಾತುಗಳು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಆದರೆ ನೀನು ಮೊದಲನೇಸಾರಿ ನನ್ನ ಹತ್ತಿರ ಬಂದಿರುವಿ. ನನ್ನ ಮುಂದೆ ಇಷ್ಟು ಧೈರ್ಯ

ರಾಜನು ಕೇಶವನನ್ನು ಬಹಳವಾಗಿ ಮೆಚ್ಚಿಕೊಂಡು, ಒಳ್ಳೆಯ ಬಹುಮಾನವನ್ನು ಅವನಿಗೆ ಕೊಟ್ಟು, "ಅಮಾವಾಸ್ಯೆಯ ದಿನಗಳಲ್ಲಿ ದೀಪದ ಬೆಳಕು ಬೇಕು. ನೀನು ಬರುತ್ತಾ ಇರು " ಎಂದು ಹೇಳಿ ಕಳುಹಿಸಿದನು.

ಕೇಶವನು ಹಿಂದಿರುಗಿ ಹೋಗಿ ನಕ್ಕೀರನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಬಹುಮಾನವನ್ನೂ ತೋರಿಸಿದನು. ಅದರಿಂದಾಗಿ ನಕ್ಕೀರನಿಗೆ ಎಲ್ಲೆ ಇಲ್ಲದಷ್ಟು ಕೋಪ ಬಂದು, "ಏನೋ ಇದು ? ನನ್ನ ಹತ್ತಿರ ಕೆಲಸ ಮಾಡಿಕೊಂಡಿದ್ದ ಮಾತ್ರಕ್ಕೇ ದೊಡ್ಡ ಪಂಡಿತನಾದೆನೆಂದುಕೊಂಡೆಯಾ ? ಇನ್ನು ಮೇಲೆ ನಿನ್ನ ಸೇವೆಗಳು ನನಗೆ ಬೇಕಾಗಿಲ್ಲ. ಈಗಲೇ ಹೊರಟು ಹೋಗಿಬಿಡು " ಎಂದು ಬೈದನು.

ನಕ್ಕೀರನಿಗೆ ಅಷ್ಟೊಂದು ಕೋಪಬರಲು ತಕ್ಕ ಕಾರಣವಿದ್ದಿತು. ರಾಜನು ಅದುವರೆಗೂ ನಕ್ಕೀರನ

ಹೊರತು ಬೇರೆ ಯಾರನ್ನೂ ಮೆಚ್ಚಿಕೊಂಡವನಲ್ಲ. ಕೇಶವನಿಗೆ ರಾಜನಿಂದ ಬಂದ ಪ್ರಶಂಸೆಗಳನ್ನು ನೋಡಿ ಅವನಲ್ಲಿ ಅಸೂಯೆ ಕೆರಳಿ ಎದ್ದಿತ್ತು.

ಕೇಶವನು ನತ್ಕೀರನ ಕಾಲಿಗೆ ಬಿದ್ದು ದೀನವಾಗಿ ಬೇಡಿಕೊಳ್ಳುತ್ತ, "ಇನ್ನು ಮೇಲೆ ನಿಮ್ಮ ಅಪ್ಪಣೆ ಇಲ್ಲದೆ ಹೊರಗೆಲ್ಲಿಯೂ ಬಾಯಿ ಬಿಚ್ಚಲಾರೆನು. ನಾನು ಇಲ್ಲಿಯೇ ಇರಲು ಅನುಮತಿಕೊಡಿ" ಎಂದು ಪ್ರಾರ್ಥಿಸಿದನು.

ಸ್ವಲ್ಪ ಹೊತ್ತಿಗೆ ನತ್ಕೀರನು ಶಾಂತತೆಗೆ ಬಂದು, "ನನ್ನ ಆಜ್ಞೆ ಇಲ್ಲದೆ ಇನ್ನೊಬ್ಬರ ಮುಂದೆ ಉಸಿರೆತ್ತಬೇಡ. ಇದಕ್ಕೆ ವ್ಯತಿರೇಕವಾಗಿ ನಡೆದರೆ, ಮರುಕ್ಷಣದಲ್ಲೇ ನಿನಗೆ ಇಲ್ಲಿಂದ ಸ್ವಸ್ತಿ ! ಜಾಗ್ರತೆ !" ಎಂದು ಎಚ್ಚರಿಸಿದನು.

ಮರುದಿನ ಕೂಡಾ ನತ್ಕೀರನಿಗೆ ಸುಸ್ತಿಯಾಗಿಯೇ ಇದ್ದಿತು. ಆದಿನ ಅವನು ಮತ್ತೊಬ್ಬ ಬುದ್ಧಿವಂತಿಕೆ ಕಡಿಮೆಯಾಗಿದ್ದ ಸೇವಕನ ಹತ್ತಿರ ಈ ದಿನವೂ ಬರಲಾಗುವುದಿಲ್ಲವೆಂದು ರಾಜನಿಗೆ ಸುದ್ದಿ ಕಳುಹಿಸಿದನು. ರಾಜನು ಅವನ ಹತ್ತಿರ ಕೇಶವನನ್ನು ಕುರಿತು ಕೇಳಿದನು. ಈ ಸಂಗತಿಯನ್ನು ಹಿಂದಿರುಗಿ ಬಂದ ಆ ಸೇವಕನಿಂದ ತಿಳಿದು ನತ್ಕೀರನ ಅಸೂಯೆ ಇನ್ನಷ್ಟು ಹೆಚ್ಚಾಯಿತು.

ಹೀಗೆ ನಾಲ್ಕು ದಿನಗಳು ಕಳೆದುವು. ಆಗ ನತ್ಕೀರನಿಗೆ ಆರೋಗ್ಯ ಚೆನ್ನಾಯಿತು. ಅವನು ರಾಜನ ಬಳಿಗೆ ಹೋದನು. ರಾಜನು ಅವನ ಅನಾರೋಗ್ಯವನ್ನು ಕುರಿತು ಒಂದು ಮಾತೂ ಕೇಳದೆ, ಕೇಶವನೇನಾದನೆಂದು ಪ್ರಶ್ನೆ ಮಾಡಿದನು.

ಅದಕ್ಕೆ ನತ್ಕೀರನು, "ಒಳ್ಳೆಯ ಗಂಧದ ಮರವೇ ಇದರಿನಲ್ಲಿರುವಾಗ, ಗಂಧವನ್ನು ಹಚ್ಚಿಕೊಳ್ಳುವ ಮನುಷ್ಯನು ಏನಾದನೆಂದು ಆಲೋಚಿಸುವುದು ತಮ್ಮಂಥವರಿಗೆ ಸಲ್ಲದು" ಎಂದನು ರಾಜನನ್ನು ಎಚ್ಚರಿಸುವವನಂತೆ.



ಇಲ್ಲಿ ನತ್ಕೀರನು ಹೇಳಲಿದ್ದುದೇನೆಂದರೆ, ತಾನು ಒಳ್ಳೆಯ ಗಂಧದ ಮರವೆಂದೂ, ಕೇಶವನು ಅದರ ಗಾಳಿ ತಾಗಿಸಿಕೊಂಡವನಷ್ಟೇ ಎಂದೂ ಆಗಿತ್ತು.

ನತ್ಕೀರನ ಮಾತುಕೇಳಿ ರಾಜನು ಆಶ್ಚರ್ಯಪಡುತ್ತಾ, "ಮನುಷ್ಯನು ಹಚ್ಚಿಕೊಳ್ಳುವ ಗಂಧದಿಂದ ಗಂಧದ ಮರಕ್ಕೆ ಹೆಸರು ಬರುತ್ತದೆ. ನೀವು ಅನಾರೋಗ್ಯದಲ್ಲೇ ನನ್ನನ್ನು ನೋಡಲು ಬಂದಿರಿ" ಎಂದನು.

ನತ್ಕೀರನು ಮತ್ತೇನೂ ಮಾತಾಡದೆ, ರಾಜನಿಂದ ಅಪ್ಪಣೆ ಪಡೆದು ಮನೆಗೆ ಹಿಂದಿರುಗಿ ಬಿಟ್ಟನು. ಕೂಡಲೇ ಅವನು ಕೇಶವನನ್ನು ಕರೆದು, "ನಾನು ಇಷ್ಟು ಕಾಲದವರೆಗೆ ನಿನ್ನ ಪ್ರತಿಭೆಯನ್ನು ತಿಳಿಯಲಾರದೆ ಹೋದೆನು. ಇವತ್ತಿನಿಂದ ನಿನ್ನನ್ನು ನನಗೆ ಸಮಾನನನ್ನಾಗಿ ಮಾಡಲು ಪ್ರಯತ್ನಿಸುತ್ತೇನೆ. ಇತ್ತೀಚೆಗೆ ನಿನಗೆ ದುಃಖವನ್ನು ಉಂಟುಮಾಡಿರುವುದಕ್ಕೆ ನನ್ನನ್ನು ಕ್ಷಮಿಸು. ಕೇಶವಾ !" ಎಂದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಈಗ ಈ ಕಥೆಯಲ್ಲಿ ನನಗೊಂದು ಸಂದೇಹವಿದೆ. ನಕ್ಕೀರನಂತಹ ಮಹಾಕವಿ, ತನ್ನ ಸೇವಕನೊಂದಿಗೆ ಕ್ಷಮಿಸುವಂತೆ ಕೇಳುವುದು ಎಷ್ಟೊಂದು ಅವಮಾನಕರವೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ? ಆದರೆ ಒಂದು ಮಾತ್ರ ನಿಜ. ಕೇಶವನಿಗೆ ರಾಜನಿಂದ ಒಳ್ಳೆಯ ಪ್ರಶಂಸೆ ಬಂದುದರಿಂದ ನಕ್ಕೀರನಲ್ಲಿ ಅಸೂಯೆಯನ್ನು ಕೆರಳಿಸಿತ್ತು. ಈ ಸಂಗತಿ ಅವನಿಗೂ ಕೇಶವನಿಗೂ ಹೊರತು ಮೂರನೆಯವನಿಗೆ ತಿಳಿಯುವ ಅವಕಾಶವಿರಲಿಲ್ಲ. ಎಂತಹ ಕಳ್ಳನೂ ದುಷ್ಟನೂ ಆದವನು ಕೂಡಾ ತಾವು ಅಂತಹವರಾದುದಕ್ಕೆ ನಾಚಿಕೆ ಪಡುವುದಿಲ್ಲ. ಆದರೆ ಇತರರು ಆ ಸಂಗತಿ ತಿಳಿದುಕೊಂಡರೆಂದು ಗೊತ್ತಾದ ಕೂಡಲೇ ಲಜ್ಜೆ ಭಯಗಳಿಂದ ಕುಂದಿ ಹೋಗುತ್ತಾರೆ. ಹಾಗಿರುವಾಗ ನಕ್ಕೀರನಂತಹ ಮಹಾಕವಿ ತನ್ನ ಅಸೂಯೆಯನ್ನು ಒಪ್ಪಿಕೊಂಡ ಹಾಗೆ ಕಳವಳಪಟ್ಟು, ಸೇವಕನ ಹತ್ತಿರ ಕ್ಷಮಾಪಣೆ ಕೇಳುವುದು ಹಾಸ್ಯಾಸ್ಪದವಾಗಿದೆಯಲ್ಲವೆ? ರಾಜನು ನಕ್ಕೀರನೊಂದಿಗೆ ಹೇಳಿದ ಮಾತಿನ ಧೋರಣೆ ನೋಡಿದರೆ ಅವನಿಗೆ ನಕ್ಕೀರನ ಅಸೂಯೆ ಗೊತ್ತಾದಂತೆ ಕಾಣುವುದಿಲ್ಲ. ಹಾಗಿರುವಾಗ ಯಾವ ಕಾರಣದಿಂದ ನಕ್ಕೀರನು ತನ್ನ ಸೇವಕನ ಹತ್ತಿರ ಕ್ಷಮಾಪಣೆ ಕೇಳಬೇಕಾಗಿ ಬಂತು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಒಡೆದು ನುಚ್ಚುನೂರಾಗುತ್ತದೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆ ಉತ್ತರ ಕೊಟ್ಟನು: "ನಕ್ಕೀರನ ಅಸೂಯೆಯನ್ನು ಕುರಿತು ಮೂರನೆಯವನಿಗೆ ತಿಳಿಯುವ ಅವಕಾಶ ಇಲ್ಲವೆನ್ನುವುದು ಸರಿಯಲ್ಲ. ಅವನ ಅನಾರೋಗ್ಯವನ್ನು ಕುರಿತು ಹೇಳಲು ಎರಡನೇ ಸಾರಿ ಕೇಶವನ ಬದಲಿಗೆ ಮತ್ತೊಬ್ಬ ಸೇವಕನು ಬಂದಾಗಲೇ ರಾಜನಿಗೆ ಆ ಸಂಗತಿ ಗೊತ್ತಾಗಿದೆ. ಆ ಕಾರಣದಿಂದಲೇ ಅವನು, ನಕ್ಕೀರನು ಒಳ್ಳೆಯ ಗಂಧದ ಮರವೆಂದು, ಆದರ ಗಂಧ ಹಚ್ಚಿಕೊಂಡ ಮನುಷ್ಯನ ಸಾಮ್ಯವನ್ನು ತಂದಾಗ, ಅವನ ಆರೋಗ್ಯವು ಸರಿಯಾದ ಮೇಲೆಯೇ ತನ್ನ ದರ್ಶನಕ್ಕೆ ಬಂದನೆಂದು ತಿಳಿದಿದ್ದರೂ, ನೀವು ಅನಾರೋಗ್ಯದಿಂದಲೇ ನನ್ನನ್ನು ನೋಡಲು ಬಂದಿರಿ ಎಂದನು. ಅಸೂಯೆಯುಳ್ಳವನು ಅನಾರೋಗ್ಯದವನೆಂದು ಆ ಮಾತಿನ ಅರ್ಥ. ಅದನ್ನು ತಿಳಿದುದರಿಂದಲೇ ನಕ್ಕೀರನು ತನ್ನ ಸೇವಕನ ಹತ್ತಿರ ಕ್ಷಮೆ ಕೇಳಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.






# ಶಾಪವಿಮೋಚನೆ

ಒಂದಾನೊಂದು ಪುರಾಣ ಕಾಲದಲ್ಲಿ ಚಂದ್ರಮುಖಿನೆಂಬ ಗಂಧರ್ವನು ಭೂಲೋಕಕ್ಕೆ ಬಂದು ಒಂದು ಅರಣ್ಯದಲ್ಲಿ ಚಿತ್ರವಿಚಿತ್ರಗಳನ್ನು ನೋಡುತ್ತ ತಿರುಗಾಡಿಕೊಂಡಿದ್ದನು. ಆಗ ಅವನು ತನಗೆ ತಿಳಿಯದಂತೆ ಒಬ್ಬ ಮುನಿಯ ಕಮಂಡಲುವನ್ನು ಎಡವಿಬಿಟ್ಟನು. ಆ ಶಬ್ದದಿಂದ ಮುನಿಗೆ ತಪೋಭಂಗವಾಗಿ ಅತ್ಯಂತ ಕೋಪದಿಂದ ಚಂದ್ರಮುಖಿನನ್ನು ನೋಡುತ್ತ, "ಎಲೋ ಗರ್ವಾಂಧನಾದ ಗಂಧರ್ವನೇ ! ನನ್ನ ಕಮಂಡಲುವನ್ನು ಒದ್ದು ತಪಸ್ಸಿಗೆ ಭಂಗಮಾಡಿದ ನೀನು ಬ್ರಹ್ಮರಾಕ್ಷಸನಾಗಿ ಹೋಗು ! ಇನ್ನು ಮೇಲೆ ನಿನ್ನ ಬದುಕು ನೈಮಿಷಾರಣ್ಯದಲ್ಲೇ ಕಳೆಯಲಿ" ಎಂದು ಶಾಪ ಕೊಟ್ಟನು.

ಈ ಭಯಂಕರ ಶಾಪವನ್ನು ಕೇಳಿ ಚಂದ್ರಮುಖಿನು ಆಪಾದಮಸ್ತಕ ಪರ್ಯಂತ ಕಂಪಿಸುತ್ತ, ತನ್ನ ತಪ್ಪನ್ನು ಕ್ಷಮಿಸಬೇಕೆಂದು ಮುನಿಯ ಮುಂದೆ ಸಾಷ್ಟಾಂಗಬಿದ್ದು ಬಹು ದೀನನಾಗಿ ಬೇಡಿಕೊಂಡನು. ಅದನ್ನು ನೋಡಿ ಮುನಿಗೆ ಕರುಣೆ ಬಂದು, "ನೀನು ತಿರುಗುವ ಅರಣ್ಯ ಪ್ರಾಂತದಲ್ಲಿ ದಾರಿಕಾರ ಮನುಷ್ಯರನ್ನು ನೋಡಿದ ಕೂಡಲೇ ಭಯಂಕರವಾಗಿ ಕೂಗು. ಆ ಕೂಗಿನಿಂದಲೇ ಅವರು ಎದೆಯೊಡೆದು ಸತ್ತವರನ್ನು ಮಾತ್ರ ತಿನ್ನು. ನಿನ್ನ ಕೂಗಿನಿಂದ ಪ್ರಾಣ ಬಿಡದಿರುವ ಮಾನವನಿಂದಲೇ ನಿನಗೆ ಶಾಪ ವಿಮೋಚನೆ" ಎಂದನು.

ಮತ್ತೆ ಸ್ವಲ್ಪ ಹೊತ್ತಿನೊಳಗೇ ಚಂದ್ರಮುಖಿನಿಗೆ ಬ್ರಹ್ಮರಾಕ್ಷಸನ ರೂಪ ಬಂದುಬಿಟ್ಟಿತು. ಅವನು ಸೀದಾ ನೈಮಿಷಾರಣ್ಯಕ್ಕೆ ಹೋಗಿ, ಅಲ್ಲಿ ದಾರಿಯ ಬದಿಯಲ್ಲಿದ್ದೊಂದು ಬೀಳಲುಬಿಟ್ಟ ಆಲದ ಮರದ ಮೇಲೆ ತನ್ನ ನಿವಾಸವನ್ನು ಏರ್ಪಡಿಸಿಕೊಂಡನು.

ಒಂದು ದಿನ ಸಾಯಂಕಾಲದ ಹೊತ್ತಿನಲ್ಲಿ ಅವನ ಹೊಟ್ಟೆಯಲ್ಲಿ ಭಗಭಗನೆ ಹಸಿವೆಯ ಬೆಂಕಿ ಉರಿಯುತ್ತಿರುವಾಗ, ಆ ದಾರಿಯಾಗಿ ಒಬ್ಬ ಮನುಷ್ಯನು ಬಂದನು. ಕೂಡಲೇ ಬ್ರಹ್ಮರಾಕ್ಷಸನು ಭಯಂಕರವಾಗಿ ದೊಡ್ಡ ಧ್ವನಿಯಿಂದ ಕೂಗಿದನು. ಆ ಕೂಗಿನಿಂದ ಬೆದರಿ ಓಡುವ ಆ ಮನುಷ್ಯನು ಗುಂಡಿಗೆಯೊಡೆದುಬಿದ್ದು ಪ್ರಾಣಬಿಟ್ಟನು. ಅವನನ್ನು ತಿಂದು ಬ್ರಹ್ಮರಾಕ್ಷಸನು ಹಸಿವೆ ತೀರಿಸಿಕೊಂಡನು. ಆದರೆ ಇದು ನಡೆದ ಮೇಲೆ ಆ ಪ್ರಾಂತದಲ್ಲಿ ಬ್ರಹ್ಮ

ರಾಂಬಾಬು

ರಾಕ್ಷಸನಿದ್ದಾನೆಂದು ತಿಳಿದು ಜನರು ಆ ಕಡೆಗೆ ಬರುವುದನ್ನೇ ನಿಲ್ಲಿಸಿಬಿಟ್ಟರು. ಆದುದರಿಂದ ಬ್ರಹ್ಮರಾಕ್ಷಸನು ತಾನಿರುವ ಆಲದ ಮರವನ್ನು ಬಿಟ್ಟು, ಮತ್ತೊಂದು ಅರಣ್ಯಕ್ಕೆ ಹೋಗಿ ಅಲ್ಲಿರುವ ಒಂದು ಆಲದ ಮರವನ್ನು ಆಶ್ರಯಿಸಿದನು.

ಇಲ್ಲಿ ಕೂಡಾ ಒಬ್ಬಿಬ್ಬರ ಹೊರತು ಆಮೇಲೆ ಅವನಿಗೆ ನರಮಾಂಸ ಲಭಿಸಲಿಲ್ಲ. ಅವನಿರುವ ಪ್ರಾಂತಕ್ಕೆ ಹೋದ ಮನುಷ್ಯರು ಹಿಂದಿರುಗಿ ಬಾರದುದರಿಂದ, ಅಲ್ಲಿ ಯಾವಾನೋ ರಾಕ್ಷಸನಿರುವನೆಂದು ಜನರಿಗೆ ಗೊತ್ತಾಗಿತ್ತು. ಹೀಗಾಗಿ ಮತ್ತೆ ಬ್ರಹ್ಮರಾಕ್ಷಸನಿಗೆ ಹಸಿವೆಯ ಕಾಟ ಹೆಚ್ಚೇ ಆಯಿತು.

ಬೇರೊಂದು ಅರಣ್ಯಭಾಗಕ್ಕೆ ಹೋಗಬೇಕೆಂದು ಅವನು ಆಲೋಚಿಸಿಕೊಂಡಿರುವಾಗ ಒಂದು ದಿನ ನಡು ಮಧ್ಯಾಹ್ನದ ಹೊತ್ತಿನಲ್ಲಿ ಆ ದಾರಿಯಾಗಿ ಒಬ್ಬ ಮನುಷ್ಯನು ಬರುವುದು ಕಂಡಿತು.

ಬ್ರಹ್ಮರಾಕ್ಷಸನು ಬ್ರಹ್ಮಾನಂದದಿಂದ ಪ್ರಳಯ ಭಯಂಕರವಾಗಿ ಒಂದು ಕೂಗು ಹಾಕಿದನು. ಆದರೆ ಆ ದಾರೀಕಾರನು ತಲೆಬಗ್ಗಿಸಿಕೊಂಡು ತನ್ನ ಪಾಡಿಗೆ ನಡೆಯುತ್ತಲೇ ಇದ್ದನು.

ಮುನಿ ಹೇಳಿದಂತೆ ಬ್ರಹ್ಮರಾಕ್ಷಸನಾದ ಚಂದ್ರಮುಖನಿಗೆ ಆಗಲೇ ಶಾಪವಿಮೋಚನೆಯಾಯಿತು. ಮೊದಲಿನಂತಹ ಗಂಧರ್ವನ ನಿಜರೂಪವು ಬಂದುಬಿಟ್ಟಿತು. ಆ ದಾರೀಕಾರನಿಗೆ ತನ್ನ ಕೃತಜ್ಞತೆಯನ್ನು ತಿಳಿಸಲು, ಗಂಧರ್ವನು ಅವನ ಮುಂದೆ ಹೋಗಿ ತನ್ನ ಸಮಾಚಾರವನ್ನೆಲ್ಲಾ ಹೇಳಿ, ತನ್ನಿಂದ ಏನಾದರೂ ಸಹಾಯವನ್ನು ಕೇಳಿಕೊಳ್ಳುವಂತೆ ಹೇಳಿದನು.

ಆ ಮನುಷ್ಯನು ಚಂದ್ರಮುಖನನ್ನು ಆಶ್ಚರ್ಯದಿಂದ ನೋಡುತ್ತ, " ನನಗೆ ಬ್ರಹ್ಮಕಿವುಡು, ಇಷ್ಟು ಹತ್ತಿರ ಬಂದು ಹೇಳುವಿರಿ. ನನಗೆ ಕೇಳುವುದಿಲ್ಲ " ಎಂದನು.

ಅದನ್ನು ಕೇಳಿ ಚಂದ್ರಮುಖನಿಗೆ ತನ್ನ ಭಯಂಕರವಾದ ಕೂಗಿನಿಂದ ಅವನು ಹೇಗೆ ಬದುಕಿರುವನೆಂಬುದು ಅರ್ಥವಾಯಿತು. ತನ್ನ ಶಾಪವಿಮೋಚನೆಗೆ ಅವನ ಬ್ರಹ್ಮ ಕಿವುಡೇ ಕಾರಣವೆಂದು ತಿಳಿದ ಗಂಧರ್ವನು ನಗುತ್ತ, ಅವನಿಗೆ ಕೇಳುವ ಶಕ್ತಿಯನ್ನು ಪ್ರಸಾದಿಸಿ ತನ್ನ ಕಥೆಯನ್ನು ಹೇಳಿದನು.

ಕಿವುಡು ಹೋಗಲಾಡಿಸಿಕೊಂಡವನು ಚಂದ್ರಮುಖನ ಕಾಲಿಗೆ ನಮಸ್ಕಾರಮಾಡಿ, " ಅಯ್ಯಾ, ನಿಮ್ಮ ದುರದೃಷ್ಟವು ನನಗೆ ಒಳ್ಳೆಯ ಅದೃಷ್ಟವೇ ಆಯಿತು ! " ಎಂದನು.

ಹೌದೆಂದು ತಲೆಯಾಡಿಸಿ ಚಂದ್ರಮುಖನು ತನ್ನ ಲೋಕಕ್ಕೆ ಹೋದನು.





ನಮ್ಮ ದೇವಾಲಯಗಳು:

## ಮೀನಾಕ್ಷಿ ಆಲಯ

ಒಂದು ಕಾಲದಲ್ಲಿ ದೇವೇಂದ್ರನು ಭೂಲೋಕಕ್ಕೆ ಬಂದು ಸುಂದರವಾದೊಂದು ಕಾಡಿನೊಳಗೆ ಹೋಗುತ್ತಾ, ಪ್ರಶಾಂತವಾದೊಂದು ಸ್ಥಳವನ್ನು ನೋಡಿ ಅಲ್ಲಿ ಕುಳಿತು ಪರಮೇಶ್ವರನನ್ನು ಧ್ಯಾನ ಮಾಡಿದನು. ಆ ರೀತಿಯಲ್ಲಿ ಇಂದ್ರನು ಆ ಸ್ಥಳಕ್ಕೆ ಒಂದು ಪವಿತ್ರತೆಯನ್ನು ಬರಿಸಿ, ಅಲ್ಲಿಂದ ಹೊರಟು ಹೋದನು.

ಅನಂತರ ಸ್ವಲ್ಪಕಾಲದ ಮೇಲೆ, ಒಬ್ಬ ರಾಜನು ಬೇಟೆಯಾಡಲು ಆ ಕಾಡಿಗೆ ಪ್ರವೇಶಿಸಿ, ಇಂದ್ರನು ಕುಳಿತ ಜಾಗೆಗೆ ಬಂದ ಕೂಡಲೇ ಅವನಿಗೆ ಬೇಟೆಯ ಉತ್ಸಾಹವು ತಗ್ಗಿತು. ಅವನ ಮನಸ್ಸು ಶಾಂತಿಯಿಂದಲೂ ದೈವಭಕ್ತಿಯಿಂದಲೂ ತುಂಬಿತು. ತನ್ನ ರಾಜಧಾನಿಯನ್ನು ಆ ಸ್ಥಳಕ್ಕೆ ತರಬೇಕೆಂಬ ಹೊಸ ಆಲೋಚನೆ ಅವನಿಗೆ ಬಂದಿತು.





ಆ ದಿನ ರಾತ್ರಿ ಆ ರಾಜನಿಗೆ ಬಂದ ಕನಸಿನಲ್ಲಿ, ತಾನು ನೋಡಿದ ಅಡವಿ ಪ್ರಾಂತದಲ್ಲಿ ಜೇನಿನ ಬಿಂದುಗಳು ಬೀಳುವುದನ್ನೂ, ಅವುಗಳನ್ನು ಶಿವನೇ ಹಾಗೆ ಬೀಳಿಸುವುದನ್ನೂ ನೋಡಿದನು. ಮರುದಿನ ಬೆಳಗಾದ ಮೇಲೆ ರಾಜನು ತನ್ನ ರಾಜಧಾನಿಯನ್ನು ಅಲ್ಲಿಗೆ ಮಾರ್ಪಡಿಸಲು ತೊಡಗಿ, ನೂತನವಾದ ಆ ರಾಜಧಾನೀ ನಗರಕ್ಕೆ ಮಧುರಾಪುರವೆಂದು ನಾಮಕರಣ ಮಾಡಿದನು.



ಕೆಲವು ದಿನಗಳ ಮೇಲೆ ಆ ರಾಜನಿಗೆ ಒಬ್ಬಳು ಮಗಳು ಹುಟ್ಟಿದಳು. ಮೀನುಗಳಂತಹ ಅಂದ ವಾದ ಕಣ್ಣುಗಳುಳ್ಳ, ಅಪೂರ್ವ ಸೌಂದರ್ಯ ತುಂಬಿದ ತನ್ನ ಆ ಮಗಳಿಗೆ ಮೀನಾಕ್ಷಿ ಎಂದು ಹೆಸರಿಟ್ಟನು. ರಾಜನಿಗೆ ಅವಳು ಏಕೈಕ ಸಂತಾನ ವಾಗಿದ್ದಳು.

ಯುಃವರಾಣಿ ಮೀನಾಕ್ಷಿ ಬಹಳ ಬೇಗದಲ್ಲೇ ರಾಜೋಚಿತವಾದ ವಿದ್ಯೆಗಳನ್ನೆಲ್ಲಾ ಕಲಿತು ಪಾರಂಗತಳಾದಳು. ಅವಳಿಗೆ ಯುಕ್ತ ವಯಸ್ಸು ಬಂದಾಗ ರಾಜನು ಅವಳಿಗೆ ಪಟ್ಟಾಭಿಷೇಕವನ್ನು ಮಾಡಿದನು. ತಂದೆಯ ಅನಂತರ ಯುವರಾಣಿ ಮೀನಾಕ್ಷಿದೇವಿ ಪ್ರಜಾನುರಂಜಕಳಾಗಿ ಪರಿಪಾಲನೆ ಮಾಡಿಕೊಂಡಿದ್ದಳು.






ಅವಳ ವೈಭವವನ್ನು ನೋಡಿ ಅಕ್ಕಪಕ್ಕದ ರಾಜರು ಅಸೂಯೆ ಪಡಲು ತೊಡಗಿದರು. ಮೊದಲು ಒಬ್ಬಳು ಹೆಂಗಸು ರಾಜ್ಯಪಾಲನೆ ಹೇಗೆ ಮಾಡುತ್ತಾಳೆಂದು ಸಂದೇಹ ಪಟ್ಟವರೆಲ್ಲ ಅವಳ ಶಕ್ತಿ ಸಾಮರ್ಥ್ಯಗಳನ್ನು ಕೀರ್ತಿಸತೊಡಗಿ ದರು. ಇದನ್ನೆಲ್ಲ ನೋಡಿ ಅಕ್ಕಪಕ್ಕದ ರಾಜರು ತಂತ್ರಮಾಡಿ ಒಮ್ಮೆಗೇ ದಂಡೆತ್ತಿ ಬಂದು ಮಧುರೆಯನ್ನು ಮುತ್ತಿದರು.

ಯುವರಾಣಿ ಮೀನಾಕ್ಷಿ ತನ್ನ ಸೇನೆಗೆ ತಾನೇ ನಾಯಕಿಯಾಗಿದ್ದು ಶತ್ರು ಸೇನೆಯನ್ನು ಇದಿರಿಸಿದಳು. ಯುದ್ಧ ರಂಗದಲ್ಲಿ ಅವಳು ಮಿಂಚಿನ ವೇಗದಲ್ಲಿ ಧಾವಿಸುತ್ತ ಬೀಸುವ ಖಡ್ಗಾಘಾತಗಳಿಗೆ ಯಾರೂ ನಿಲ್ಲಲಾಗದೆ ಹೋದರು. ದೊಡ್ಡ ಸುಳಿಗಾಳಿಗೆ ಉದುರುವ ಒಣತರಗೆಲೆಗಳಂತೆ ಶತ್ರು ಸೇನೆಗಳು ಚೆಲ್ಲಾಚೆದರಾದರು.





ಮೀನಾಕ್ಷಿದೇವಿ ಶತ್ರು ಸೇನೆಯನ್ನು ಅಟ್ಟುತ್ತಾ ಹೋಗಿ ನಗರದ ಎಲ್ಲೆಯಲ್ಲಿದ್ದ ಅಡವಿ ಪ್ರಾಂತವನ್ನು ಸೇರಿದಳು. ಅಲ್ಲಿ ಅವಳಿಗೊಬ್ಬ ಅಪರಿಚಿತ ವ್ಯಕ್ತಿ ಕಂಡು ಬಂದನು. ಆಗ ಅವಳ ಕಣ್ಣಿಗೆ ಮಿಂಚು ಹೊಳೆದಂತಾಗಿ, ಕುದುರೆಯನ್ನು ಅಲ್ಲೇ ನಿಲ್ಲಿಸಿದಳು.

ಅಲ್ಲಿ ಅವಳಿಗೆ ಕಂಡವನು ಸಾಕ್ಷಾತ್ ಈಶ್ವರನೇ. ಶಿವದರ್ಶನವಾದ ಕೂಡಲೇ ಅವಳು ಕೂಡಾ ತಾನು ಪಾರ್ವತಿಯ ಅವತಾರವೆಂಬುದನ್ನು ತಿಳಿದುಕೊಂಡಳು. ಆಮೇಲೆ ಬೇಗದಲ್ಲೇ ಮೀನಾಕ್ಷೀ ಸುಂದರೇಶ್ವರರ ವಿವಾಹವು ಬಹು ವೈಭವದಿಂದ ನೆರವೇರಿತು.





ಯುವರಾಣಿ ಮೀನಾಕ್ಷಿ ಪಾರ್ವತಿದೇವಿಯ ಅವತಾರವೆಂದು ತಿಳಿದ ಕೂಡಲೇ ಪ್ರಜೆಗಳೆಲ್ಲಾ ಅವಳನ್ನು ಪೂಜಿಸಲು ತೊಡಗಿದರು. ಅವಳು ಭೌತಿಕ ಕಾಯವನ್ನು ವಿಸರ್ಜಿಸಿದ ಮೇಲೆ ಅವಳ ರೂಪದ ವಿಗ್ರಹವನ್ನು ತಯಾರಿಸಿ ಅರ್ಚಿಸ ತೊಡಗಿದರು. ಆಲಯದಲ್ಲಿ ದೇವಿಯ ವಿಗ್ರಹದ ಪಕ್ಕದಲ್ಲಿ ಸುಂದರೇಶ್ವರನ ವಿಗ್ರಹವನ್ನೂ ಪ್ರತಿಷ್ಠೆ ಮಾಡಿದರು.

ಮಧುರೆಯ ಮೀನಾಕ್ಷಿ ದೇವಾಲಯವು ಬಹಳ ದೊಡ್ಡದು. ಎತ್ತರವಾದ ಗೋಪುರಗಳಿಂದ, ಸಾವಿರ ಕಂಬಗಳ ಮಂಟಪಗಳಿಂದ ಸುಪ್ರಸಿದ್ಧ ವಾದ ಅದ್ಭುತ ಶಿಲ್ಪಗಳಿಂದ ಈ ಆಲಯವು ಬೆಳಗಿಕೊಂಡಿದೆ.





ನಮ್ಮ ದೇಶದಲ್ಲಿ ಮಾತ್ರವಲ್ಲದೆ ಪ್ರಪಂಚ ದೊಳಗಿನ ಅತಿ ಪ್ರಾಚೀನ ನಗರಗಳಲ್ಲಿ ಮಧುರೆಯೂ ಒಂದೆಂದು ಹೆಸರು ಪಡೆದಿದೆ. ನಗರದ ಮಧ್ಯದಲ್ಲಿ ಮೀನಾಕ್ಷಿ ಆಲಯವಿದೆ. ಸಂವತ್ಸರದುದ್ದಕ್ಕೂ ದೇಶದ ನಾಲ್ಕು ಮೂಲೆ ಗಳಿಂದಲೂ ಯಾತ್ರಿಕರು ಬರುತ್ತಾ ಇರುವರು. ಭಕ್ತರ ಭಕ್ತಿಗೀತಗಳಿಂದ, ಪ್ರಾರ್ಥನೆಗಳಿಂದ ದೇವಾಲಯವು ಯಾವಾಗಲೂ ಮಾರ್ದೊಳಗಿ ಕೊಂಡಿರುತ್ತದೆ.




ಹಿಂದೆ ಒಂದು ಕಾಲದಲ್ಲಿ ಅಕ್ಕನಪುರವೆಂಬ ಒಂದು ಗ್ರಾಮವಿತ್ತು. ಅಲ್ಲಿ ಆನಂದಮ್ಮ ಮತ್ತು ಗೋವಿಂದಯ್ಯ ಎಂಬ ಶ್ರೀಮಂತ ದಂಪತಿಗಳಿದ್ದರು. ಗೋವಿಂದಯ್ಯನಿಗೆ ಗ್ರಾಮದಲ್ಲಿ ಬಹಳ ಒಳ್ಳೆಯವನೆಂಬ ಹೆಸರಿದ್ದಿತು. ಆದರೆ ಆನಂದಮ್ಮನಿಗೆ ಯಾವ ಒಳ್ಳೆಯ ಹೆಸರೂ ಇರಲಿಲ್ಲ. ಎಲ್ಲರೂ ಅಸಹ್ಯಭಾವದಿಂದಲೇ ಅವಳನ್ನು ನೋಡುತ್ತಿದ್ದರು. ಅದಕ್ಕೆ ಕಾರಣ ಅವಳಲ್ಲಿರುವ ಮೂರ್ಖತೆಯ ಗುಣವೇ. ಅವಳ ಬಾಯಿಯಿಂದ ಬಾಣ ದುರುಸುಗಳು ಉದುರುತ್ತಿರುತ್ತವೆ.

ಈ ದಂಪತಿಗಳ ಹಿರಿಯ ಮಗಳಿಗೆ ಮದುವೆಯ ವಯಸ್ಸು ಬಂದಿತು. ಆದರೆ ಎಲ್ಲಿ ಹುಡುಕಿದರೂ ತಕ್ಕ ಸಂಬಂಧ ದೊರಕಲೇ ಇಲ್ಲ. ಕೇಳಿದಷ್ಟು ವರದಕ್ಷಿಣೆಯೋ ಕಾಣಿಕೆಯೋ ಕೊಡಬಲ್ಲಂತಹ ಭಾಗ್ಯವಂತರಾದರೂ ಯಾವ ವರಂದಿರೂ ಮುಂದೆ ಬಾರದಿರುವುದನ್ನು ನೋಡಿ ಆನಂದಮ್ಮನಿಗೆ ಬಹಳ ಸಂಕಟವಾಯಿತು. ಒಬ್ಬಳು ಮಗಳ ಮದುವೆಗೇ ಇಷ್ಟೊಂದು ಕಷ್ಟವಾದರೆ, ಬೆಳೆಯುತ್ತಾ ಬರುವ ಉಳಿದ ಹುಡುಗಿಯರ ಗತಿ ಹೇಗೋ !

ತನ್ನ ಗಂಡ ಗೋವಿಂದಯ್ಯನಿಗೆ ಊರಿನೊಳಗೆ ಒಳ್ಳೆಯ ಹೆಸರೂ ಗೌರವವೂ ಇರುವ ಸಂಗತಿ ಆನಂದಮ್ಮನಿಗೆ ಗೊತ್ತಿತ್ತು. ತನ್ನ ಮೇಲೆಯೇ ಗ್ರಾಮಸ್ಥರಿಗೆ ಕೆಟ್ಟ ಅಸೂಯೆ. ತನ್ನನ್ನು ಯಾರೂ ಲಕ್ಷ್ಯಮಾಡುವುದಿಲ್ಲ. ಎಲ್ಲರಿಗೂ ತನ್ನ ಮೇಲೆಯೇ ಸಣ್ಣ ದೃಷ್ಟಿ. ತಾನು ಕೂಡಾ ಗಂಡನ ಹಾಗೆಯೇ ಒಳ್ಳೆಯ ಹೆಸರು ತಂದುಕೊಂಡರೆ ಬಿಚ್ಚಲಾಗದ ಸಮಸ್ಯೆಯಂತಿರುವ ತನ್ನ ಮಗಳ ಮದುವೆ ಪರಿಹಾರವಾಗಿ ಹೋಗುತ್ತದೆಂದು ಅವಳಿಗೆ ತೋರಿತು.

ಈ ಆಲೋಚನೆಯಿಂದ ಆನಂದಮ್ಮ ಒಂದು ದಿನ ಗಂಡನೊಂದಿಗೆ, "ನಿಮಗೆ ಗ್ರಾಮದಲ್ಲಿ ಒಳ್ಳೆಯ ಹೆಸರಿದೆ. ನನಗೂ ನಿಮ್ಮ ಹಾಗೆ ಒಳ್ಳೆಯ ಹೆಸರು ತಂದುಕೊಳ್ಳಲಿಕ್ಕೆ ಏನು ಮಾಡಿದರೆ ಚೆನ್ನಾಗಿರುತ್ತೆ ? " ಎಂದು ಕೇಳಿದಳು.

ಹೆಂಡತಿಯ ಮಾತುಗಳು ಗೋವಿಂದಯ್ಯನ ಕಿವಿಗೆ ಬಿದ್ದ ಅಮೃತಧಾರೆಯಂತೆ ಅನಿಸಿತು. ಏಕೆಂದರೆ, ಎಷ್ಟೋ ಕಾಲದಿಂದ ಅವಳ ಬಾಯಿಯಿಂದ ಉದುರುವ ಬಿರುಸು ಮಾತುಗಳಿಗೆ ಹೆಚ್ಚಾಗಿ ಬಲಿ ಬೀಳುವವನು ಅವನೇ.

ಜಿ. ನಿರ್ಮಲಾದೇವಿ



ಗೋವಿಂದಯ್ಯನು ಬಹಳ ಸಂತೋಷದಿಂದ, "ಇಷ್ಟು ಕಾಲದ ಮೇಲೆ ಯಾವ ದೇವರೋ ನಿನ್ನ ಮನಸ್ಸಿಗೆ ಹೊಕ್ಕು ಒಳ್ಳೆಯ ಬುದ್ಧಿ ಹುಟ್ಟಿಸಿದ್ದಾನೆ. ಒಂದು ಮಾತು ನೆನಪಿಟ್ಟುಕೋ. ಎಲ್ಲರೊಂದಿಗೂ ಸ್ನೇಹವಾಗಿರುತ್ತ, ಬೇರೆಯವರಿಗೆ ಸಹಾಯ ಮಾಡಿಕೊಂಡಿದ್ದರೆ ಒಳ್ಳೆಯ ಹೆಸರು ತನ್ನಂತಾನೇ ಬರುತ್ತದೆ ಅಷ್ಟೇ" ಎಂದನು.

ಆನಂದಮ್ಮನಿಗೆ ಗಂಡನ ಬುದ್ಧಿಮತ್ತತೆಯ ಮೇಲೆ ಒಳ್ಳೆಯ ನಂಬುಗೆ ಇದ್ದಿತು. ಅವನು ತುಂಬಾ ಲೋಕಾನುಭವ ಉಳ್ಳವನೆಂದು ಅವಳಿಗೆ ಗೊತ್ತಿದೆ. ಆ ಕಾರಣದಿಂದ ಗಂಡನ ಮಾತು ನಂಬಿಕೊಂಡು, ಅಂದಿನಿಂದ ಅವಳು ನೆರೆಹೊರೆಯವರೊಂದಿಗೂ, ಕೆಲಸದಾಳುಗಳೊಂದಿಗೂ, ಮಕ್ಕಳೊಂದಿಗೂ ಸೌಮ್ಯವಾಗಿ ಮಾತಾಡಲು ತೊಡಗಿದಳು. ಎಲ್ಲರಿಗೂ ಉಪಕಾರದ ಬುದ್ಧಿಯನ್ನೂ ತೋರಿಸುತ್ತಿದ್ದಳು.

ಹೀಗೆ ಕೆಲವು ದಿನಗಳು ಕಳೆದ ಮೇಲೆ, ಆನಂದಮ್ಮನಿಗೆ ತನಗೆ ಎಷ್ಟು ಒಳ್ಳೆಯ ಹೆಸರು ಬಂದಿದೆಯೆಂದು ತಿಳಿಯಬೇಕೆಂಬ ಕುತೂಹಲವಾಯಿತು. ಮೊದಲು ನೆರೆಹೊರೆಗಳ ಗೃಹಿಣಿಯರು ತನ್ನನ್ನು ಕುರಿತು ಏನೆಂದುಕೊಳ್ಳುತ್ತಾರೆಂದು ತಿಳಿಯಲು ನೋಡಿದಳು. ಈ ನಡುವೆ ಅವಳು ನೆರೆಹೊರೆಯವರಿಗೆ ಅನೇಕ ಸಹಾಯಮಾಡಿದ್ದಳು.

ಆನಂದಮ್ಮನ ಮನೆಯ ಹತ್ತಿರ ಮೀನಾಕ್ಷಮ್ಮನ ಮನೆ ಇದ್ದಿತು. ಅವಳ ಮನೆಯ ಬಿಡುಚಾವಡಿಯಲ್ಲಿ ದಿನಾ ಅಪರಾಹ್ನದಲ್ಲಿ ಮೂರು ನಾಲ್ಕು ಮನೆಯ ಹೆಂಗುಸರು ಸೇರಿ ಅದೂ ಇದೂ ಮಾತಾಡಿಕೊಂಡಿರುತ್ತಾರೆ. ಅವರ ಮಾತಿನಲ್ಲಿ ತನ್ನ ಹೆಸರು ಕೂಡಾ ಹೊರಳುವುದನ್ನು ಕೇಳಿ ಆನಂದಮ್ಮ ಅವರಿಗೆ ತಿಳಿಯದಂತೆ ಆವರಣದ ಗೋಡೆಯ ಹಿಂದೆ ನಿಂತು, ಕಿವಿಗೊಟ್ಟು ಕೇಳತೊಡಗಿದಳು.

"ಈ ಆನಂದಮ್ಮನಲ್ಲಿ ಬಂದ ಮಾರ್ಪಾಟು ನೋಡಿದರೆ ನನಗೆ ಅದೇನೋ ಅನಿಸುತ್ತದೆ. ಇಷ್ಟರವರೆಗೆ ಸಣ್ಣ ಗಾಯಕ್ಕೆ ಸುಣ್ಣ ಕೊಡುವವಳಲ್ಲ. ಅವಳ ಗುಣ ನಿಮಗೆಲ್ಲಾ ಗೊತ್ತಿದೆಯಷ್ಟೆ? ಈ ನಡುವೆ ಏನಾಯಿತು ಗೊತ್ತಾ? ಮೊನ್ನೆ ಅನ್ನ ಬಸಿಯುವಾಗ ನನ್ನ ಕೈ ಮೇಲೆ ಕುದಿಗಂಜಿ ಬಿದ್ದು ನಾನು ನೋವು ಅನುಭವಿಸುವಾಗ ಅವಳು ಬಂದು, ನನ್ನ ಕೈಗೆ ಮದ್ದು ಹಚ್ಚಿದಳು. ಅಲ್ಲಿಗೆ ಬಿಡದೆ ಉಳಿದ ಅಡಿಗೇ ಕೆಲಸ ಪೂರಾ ಅವಳೇ ಮಾಡಿಟ್ಟು ಹೋದಳು" ಎಂದಳು ಒಬ್ಬಳು.

ಅದನ್ನು ಅನುಸರಿಸಿ ಮತ್ತೊಬ್ಬಳು ಗೃಹಿಣಿ, "ಅಷ್ಟೇ ಅಲ್ಲಮ್ಮ! ನಿನ್ನೆ ನಮ್ಮ ಮಕ್ಕಳು ಆಡುತ್ತಾ ಅವಳ ಮನೇ ಮುಂದೆ ಗಲಾಟೆ ಮಾಡಿಕೊಂಡಿದ್ದರೂ ಮಾತಾಡದೆ ಸುಮ್ಮನಿದ್ದಳು. ಈ ಮೊದಲು ಮಕ್ಕಳು ಗಲಾಟೆ ಮಾಡಿದರೆ ಹಾಗೆ ಸುಮ್ಮನಿರುವಳೇ ಆನಂದಮ್ಮ? ಕೈಯಲ್ಲಿ ಕೋಲು

ಹಿಡಿದು ಮಹಾಂಕಾಳೀ ಹಾಗೆ ಆರ್ಭಟಿಸುವವಳು! ನಿಜಕ್ಕೂ ಇದೊಂದು ಪ್ರಪಂಚದಲ್ಲಿ ನಡೆಯಲಾರದ ಅದ್ಭುತವೇ!" ಎಂದಳು.

ಹೀಗೆ ಸ್ವಲ್ಪ ಹೊತ್ತು ಸಂಭಾಷಣೆ ನಡೆದ ಮೇಲೆ, ಅಲ್ಲಿ ಸೇರಿದವರೊಳಗೆ ವಯಸ್ಸಿನಲ್ಲಿ ದೊಡ್ಡವಳಾದ ಮುದುಕಿ ಸ್ವರವನ್ನು ಸ್ವಲ್ಪ ತಗ್ಗಿಸಿ, "ಹೌದೌದು. ಇದನ್ನೆಲ್ಲಾ ನೋಡುವಾಗ ಆನಂದಮ್ಮ ಏನೋ ಒಂದು ದೊಡ್ಡ ಗತ್ತು ತೆಗೆಯುತ್ತಾಳೆಂದು ಕಾಣುತ್ತದೆ. ನಾವೆಲ್ಲಾ ಬಹಳ ಜಾಗರೂಕತೆಯಲ್ಲಿರಬೇಕು ಕಣ್ರೀ! ಅವಳ ಮಗಳ ಮದುವೆಯ ಸ್ಥಿತಿ ಹಾಗೂ ಹೀಗೂ ಗೊತ್ತಾಗದ ಹಾಗೇ ನಿಂತಿರುವುದರ ಜತೆಗೆ, ಹೊಲ ಗದ್ದೆಗಳಿಂದ ಬರುವ ಆದಾಯ ಕೂಡಾ ತಗ್ಗಿದೆ ಎಂದು ಎಲ್ಲರೂ ಹೇಳಿಕೊಳ್ಳುತ್ತಾರೆ" ಎಂದಳು.

ಇದನ್ನೆಲ್ಲಾ ಕೇಳಿಕೊಂಡಿದ್ದ ಆನಂದಮ್ಮನಿಗೆ ತಲೆ ಗಿರ್ರನೆ ತಿರುಗುವ ಹಾಗಾಯಿತು. ಒಳ್ಳೆಯ ಹೆಸರು ಸಂಪಾದಿಸಲು ತಾನು ಇಷ್ಟು ದಿನ ಮಾಡಿದ ನೆರೆಹೊರೆಯವರ ಸೇವೆಯ ಫಲ ವ್ಯರ್ಥವಾಯಿತೆಂದುಕೊಂಡು ಬಹಳ ಸಂಕಟಪಡತೊಡಗಿದಳು.

ನೆರೆಹೊರೆಯವರು ತನ್ನನ್ನು ಕುರಿತು ಏನೆಂದುಕೊಳ್ಳುವರೆಂಬುದು ಗೊತ್ತಾದ ಮೇಲೆ, ಮನೆಯ ಕೆಲಸದಾಳುಗಳೂ, ಮಕ್ಕಳೂ ತನ್ನ ವಿಷಯದಲ್ಲಿ ಹೆ ಗಿದ್ದಾರೆಂದು ನೋಡಬೇಕೆಂದು ತೋರಿತು ಆನಂದಮ್ಮನಿಗೆ.

ಇದಿರುನೋಡದಂತೆಯೇ ಅದೇ ದಿನ ಮನೆಯ ಹಿಂಬದಿಯ ಕೊಟ್ಟಿಗೆಯ ಹತ್ತಿರ ಕೆಲಸದವಳು ಗಂಗಿಯೂ ಅವಳ ಗಂಡ ರಂಗನೂ ಹೇಳಿಕೊಳ್ಳುವ ಮಾತುಗಳು ಆನಂದಮ್ಮನ ಕಿವಿಗೆ ಬಿದ್ದುವು. ಅದನ್ನು ಕೇಳಿ ಅವಳ ಬುದ್ಧಿಗೇ ಮಣ್ಣು ಬಿದ್ದ ಹಾಗಾಯಿತು.

ಮುಂಚಿನ ದಿನ ಕೆಲಸದ ಗಂಗಿ ಗಾಜಿನ ಪಾತ್ರವೊಂದನ್ನು ಕೈಜಾರಿಸಿಕೊಂಡು ಒಡೆದು ಹಾಕಿದ್ದಳು.



ಅಂತಹ ತಪ್ಪು ಮಾಡಿದ್ದಕ್ಕೆ ಆನಂದಮ್ಮ ಮನೆಯ ಸೂರು ಹಾರಿ ಹೋಗುವಂತೆ ಬೈದುಕೂಗಿ ರಭಸ ಮಾಡುತ್ತಿದ್ದಳು. ಹಾಗೇನೂ ಮಾಡದೆ ಬಹಳ ಸಹನೆಯಿಂದ ಹೋದರೆ ಹೋಗಲೆಂದು ಹೇಳಿ ಸುಮ್ಮನಾಗಿ ಬಿಟ್ಟಿದ್ದಳು.

ಗಂಗಿ ಈ ಸಂಗತಿಯನ್ನು ರಂಗನೊಂದಿಗೆ ಹೇಳಿ, "ನಮ್ಮ ಅಮ್ಮಾ ಅವರು ಇಷ್ಟೇಕೆ ಬದಲಾಗಿ ಹೋದರೆಂದು ಗೊತ್ತಾಗಿಲ್ಲ. ನಿನಗೆ ಗೊತ್ತಾಗಿದೆಯಾ?" ಎಂದು ಕೇಳಿದಳು.

ರಂಗನು ಸ್ವಲ್ಪ ಹೊತ್ತು ಆಲೋಚಿಸುತ್ತ ಮೇಲೆ ಕೆಳಗೆ ನೋಡಿ, "ಏನೋ ಅಪ್ಪಾ! ಮಳೆ ಸುರಿಯುವ ಮೊದಲು ಮೋಡಗಳೆಲ್ಲ ನೋಡಲು ಚೆಂದಾಗೇ ಇರುತ್ತದೆ. ಈ ಒಂದು ವಾರದ ದಿನಗಳಲ್ಲಿ ನಾನು ಕೂಡಾ ಎರಡು ಮೂರು ತಪ್ಪುಗಳನ್ನು ಮಾಡಿದ್ದು ನೋಡಿ ಕೂಡಾ ಅಮ್ಮಾ ಅವರು ಏನೂ ಮಾತಾಡಲಿಲ್ಲ. ಮುಖದಲ್ಲಿ ಸಹಾ ಕೋಪ

ತೋರಿಸಲಿಲ್ಲ. ಏನೋ! ಇನ್ನು ಯಾವ ಕ್ಷಣದಲ್ಲಿ ಮುಗಿಬೀಳುತ್ತಾಳೋ ಆ ಮಹಾರಾಯಿತಿ! ಜೀವ ಪುಕುಪುಕು ಅನ್ನುತ್ತಾ ಇದೆ. ನಾವು ಬೇರೆ ಕೆಲಸದ ಮನೆ ಹುಡುಕುವುದು ಒಳ್ಳೇದು!" ಎಂದನು.

ಆನಂದಮ್ಮನಿಗೆ ತನ್ನ ಮಕ್ಕಳ ಪ್ರವರ್ತನೆಯಲ್ಲಿಯೂ ವಿಚಿತ್ರವೇ ಕಂಡಿತು. ಈ ಮೊದಲು ಮಕ್ಕಳು ಏನು ಮಾಡಿದರೂ ಕಸ್ಸು ಭುಸ್ಸೆಂದು ಮಕ್ಕಳನ್ನು ಹೆದರಿಸುತ್ತಿದ್ದ ಆನಂದಮ್ಮ ಈಗ ಮಕ್ಕಳ ಮುಂದೆ ಮುಖವನ್ನು ಗಂಭೀರವಾಗಿಟ್ಟು ಕೊಂಡು ಸುಮ್ಮನಿರುತ್ತಿದ್ದಳು. ಆದರಿಂದ ತಮಗೇನೋ ಕೇಡು ಬರುವುದೆಂದು ಶಂಕಿಸಿ ಮಕ್ಕಳು ದೂರ ದೂರ ಹೋಗಲು ಪ್ರಾರಂಭಿಸಿದ್ದರು.

ತಾನು ಒಳ್ಳೆಯ ಹೆಸರು ಪಡೆಯಲಿಕ್ಕಾಗಿ ಮಾಡಿದುದೆಲ್ಲ ಹೀಗೇಕೆ ಪರಿಣಮಿಸುತ್ತದೆಂದು ಎಷ್ಟು ಆಲೋಚಿಸಿದರೂ ಆನಂದಮ್ಮನಿಗೆ ಗೊತ್ತಾಗಲಿಲ್ಲ. ಅವಳು ಎಲ್ಲಾ ಸಂಗತಿಗಳನ್ನೂ ಗಂಡ ಗೋವಿಂದಯ್ಯನೊಂದಿಗೆ ಗೋಳಿಡುವಂತೆ ಹೇಳಿಕೊಂಡಳು.

ಅದನ್ನೆಲ್ಲಾ ಕೇಳಿ ಗೋವಿಂದಯ್ಯನು ಅವಳೊಂದಿಗೆ, "ನಿನ್ನ ಪ್ರವರ್ತನೆಗಳ ಕಾರಣದಿಂದಾಗಿ ಬರಬೇಕಾದ ಒಳ್ಳೆಯ ಹೆಸರು ಅದಾಗಿ ನಿನ್ನನ್ನು ಹುಡುಕಿಕೊಂಡು ಬರಬೇಕಾಗಿದೆ, ಬರುತ್ತದೆ. ಅದನ್ನು ಹುಡುಕಿಕೊಂಡು ನೀನು ಹೋಗಬಾರದು. ಮಾಡಿದ ಪ್ರತಿ ಕೆಲಸಕ್ಕೂ ಕೂಡಲೇ ಫಲ ಸಿಗಬೇಕೆಂದು ಅವಸರಪಟ್ಟರೆ ಆಶಾಭಂಗವೇ ಇದಿರಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾದ ಸಂಗತಿ ಏನೆಂದರೆ, ಒಳ್ಳೆಯ ತನವೆಂಬುದು ಎಂದಿಗೂ ಪ್ರತಿಫಲವನ್ನು ಆಶಿಸುವುದಿಲ್ಲ" ಎಂದನು.

ಅದನ್ನು ಕೇಳಿ ಆನಂದಮ್ಮ ತನ್ನ ಮೂರ್ಖತನವನ್ನು ನೆನೆದು ಬಹಳ ಲಜ್ಜಿತಳಾದಳು. ಅಂದಿನಿಂದ ಅವಳು ಇತರರು ತನ್ನನ್ನು ಕುರಿತು ಏನೆಂದು ಕೊಳ್ಳುತ್ತಾರೆಂಬುದನ್ನು ತಿಳಿಯುವ ಗೊಡವೆಯನ್ನು ಬಿಟ್ಟಳು. ತನ್ನಿಂದ ಸಾಧ್ಯವಾದಷ್ಟು ಇತರರಿಗೆ ಸಹಾಯಮಾಡುತ್ತ ಒಳ್ಳೆಯ ತನದಲ್ಲಿ ಪ್ರವರ್ತಿಸಲು ಅಭ್ಯಾಸ ಮಾಡಿಕೊಂಡಳು. ಆದರಿಂದ ಅವಳ ಮೊದಲಿನ ಬಿರುಸು ಗುಣಗಳನ್ನು ಎಲ್ಲರೂ ಮರೆಯುತ್ತ ಬಂದರು. ಹೀಗಾಗಿ ಎಲ್ಲರಿಗೂ ಅವಳ ಮೇಲೆ ಉಂಟಾದ ಅನುಮಾನಗಳು ತನ್ನಂತೆ ಮಾಯವಾದುವು. ಗ್ರಾಮಸ್ಥರೆಲ್ಲರೂ ಅವಳನ್ನು ಗೋವಿಂದಯ್ಯನಿಗೆ ತಕ್ಕ ಹೆಂಡತಿ ಎಂದು ಹೊಗಳಲಿಕ್ಕೂ ತೊಡಗಿದರು.

ಈ ಕಾರಣದಿಂದಾಗಿ ಬಹು ಬೇಗದಲ್ಲೇ ಒಳ್ಳೆಯ ವರಸಂಬಂಧವು ದೊರೆತು, ಅವರ ಮಗಳ ಮದುವೆಯೂ ಒಳ್ಳೆಯ ರೀತಿಯಲ್ಲಿ ನಡೆಯಿತು.





# ಶಿವಪುರಾಣ

ಯಾವಲೋಕಕ್ಕಾದರೂ ನಿರಾತಂಕವಾಗಿ ಹೋಗಬಲ್ಲವನೂ ಎಂತಹವರಿಂದಲೂ ಗೌರವ ಭಾವ ಹೊಂದುವವನೂ ಆದ ನಾರದನು ಜಲಂಧರನ ಬಳಿಗೆ ಹೋಗಿ, "ಜಲಂಧರಾ, ಶಿವನೂ ವಿಷ್ಣುವೂ ಮಾನಸ ಸರೋವರದಲ್ಲಿ ಅಡಗಿಕೊಂಡಿದ್ದಾರೆ" ಎಂದು ಹೇಳಿದನು.

ಅದು ತಿಳಿದ ಕೂಡಲೇ ಜಲಂಧರನು ಮಾನಸ ಸರೋವರಕ್ಕೆ ಹೋಗಿ, ನೀರಿನೊಳಗೆ ಮುಳುಗಿರುವ ಶಿವ, ವಿಷ್ಣುಗಳನ್ನು ಹುಡುಕಲು ತೊಡಗಿದನು. ಅವನು ತಮ್ಮನ್ನು ಹುಡುಕುವುದನ್ನು ಕಂಡು ಹಿಡಿದು ಶಿವನೂ ವಿಷ್ಣುವೂ ಅವನಿಗೆ ತಿಳಿಯದಂತೆ ತೀರಕ್ಕೆ ಬಂದು ಜಲಂಧರನು ನೀರಿನಿಂದ ಮೇಲೆ ಬರುವುದನ್ನೇ ನಿರೀಕ್ಷಿಸಿಕೊಂಡಿದ್ದರು. ಆಗ ಶಿವನ ಕೈಯಲ್ಲಿ ವಿಷ್ಣುವಿನ ಚಕ್ರವೂ, ವಿಷ್ಣುವಿನ ಕೈಯಲ್ಲಿ ಶಿವನ ತ್ರಿಶೂಲವೂ ಇದ್ದಿತು.

ಮಾನಸ ಸರೋವರದೊಳಗೆಲ್ಲಾ ಗಾಳಿಸಿ ನೋಡಿ, ಶಿವ ವಿಷ್ಣುಗಳನ್ನು ಕಾಣದೆ ಜಲಂಧರನು ಎದ್ದು ತೀರಕ್ಕೆ ಬಂದನು. ಆಗ ಅವನಿಗೆ ಅವರಿಬ್ಬರೂ ಕಾಣಿಸಿದರು. ಅವರನ್ನು ನೋಡಿದ ಕೂಡಲೆ ಜಲಂಧರನು ಸಂತೋಷಪಟ್ಟು, ಅವರೊಂದಿಗೆ ಯುದ್ಧಕ್ಕೆ ಕಲೆಬಿದ್ದನು. ಅವರಿಬ್ಬರೂ ಜಲಂಧರನನ್ನು ಎರಡು ಖಂಡಗಳನ್ನಾಗಿ ಮಾಡಿ ಕೊಂದು ಹಾಕಿದರು. ಜಲಂಧರನ ಮರಣವನ್ನು ನೋಡಿ ಮೂರು ಲೋಕಗಳೂ ಸಂತೋಷ ಪಟ್ಟವು.

ಕಶ್ಯಪ ಪ್ರಜಾಪತಿ ಪಡೆದ ಮಗಂದಿರಲ್ಲಿ ವಿಪ್ರಚಿತ್ತಿ ಎಂಬ ದಾನವನೊಬ್ಬನಿದ್ದನು. ಆ ವಿಪ್ರಚಿತ್ತಿವಿಗೆ ದಂಭನೆಂಬ ಮಗನಿದ್ದನು. ದಂಭನು ದೊಡ್ಡ ವಿಷ್ಣು ಭಕ್ತನಾಗಿದ್ದನು. ಅವನು ಯಾವಾಗಲೂ ವಿಷ್ಣು ಪೂಜೆ ಮಾಡಿಕೊಂಡಿರುವವನು. ಆ ದಂಭನಿಗೆ ಬಹಳ ಕಾಲದವರೆಗೆ ಮಕ್ಕಳೇ ಹುಟ್ಟಲಿಲ್ಲ. ಆದುದರಿಂದ ಅವನು ಬದರಿಕಾಶ್ರಮಕ್ಕೆ ಹೋಗಿ, ವಿಷ್ಣುವನ್ನು ಧ್ಯಾನಿಸಿಕೊಂಡು ಒಂಟಿ ಕಾಲಲ್ಲಿ ನಿಂತು ದೀರ್ಘಕಾಲದವರೆಗೆ ಘೋರವಾದ ತಪಸ್ಸನ್ನು ಮಾಡಿದನು.

## ೧೧. ಶಂಖಚೂಡನ ತ್ರಿಲೋಕಾಧಿಪತ್ಯ



ಕಡೆಗೆ ವಿಷ್ಣು ದಂಭನ ಮುಂದೆ ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು.

"ಮಹಾವಿಷ್ಣು ದೇವಾ, ನನಗೆ ಬಲಶೌರ್ಯ ಪರಾಕ್ರಮಗಳಲ್ಲಿ ನಿನಗೆ ಸಮಾನನಾಗಿ, ಮೂರು ಲೋಕಗಳನ್ನೂ ಜಯಿಸಬಲ್ಲವನಾಗಿ, ಯಾರಿಂದಲೂ ಪರಾಜಯವಿಲ್ಲದವನಾಗಿ, ನಿನ್ನ ಮೇಲೆ ಭಕ್ತಿ ತುಂಬಿದವನಾಗಿ ಇರುವಂತಹ ಕುಮಾರನನ್ನು ಪ್ರಸಾದಿಸು" ಎಂದು ದಂಭನು ವಿಷ್ಣುವಿನೊಂದಿಗೆ ವರವನ್ನು ಕೇಳಿದನು.

ದಂಭನು ಕೇಳಿಕೊಂಡಂತೆ ವಿಷ್ಣು ವರಕೊಟ್ಟು ಮಾಯವಾದನು. ದಂಭನು ಮನೆಗೆ ಹಿಂದಿರುಗಿ ಬಂದು ತನಗೆ ಸಿಕ್ಕಿದ ವರದ ಶುಭವಾರ್ತೆಯನ್ನು ಹೆಂಡತಿಯೊಂದಿಗೆ ಹೇಳಿದನು. ಮುಂದೆ ಕೆಲವು ದಿನಗಳಲ್ಲಿ ದಂಭನ ಹೆಂಡತಿ ಗರ್ಭವತಿಯಾಗಿ ಒಂದು ಒಳ್ಳೆಯ ಮುಹೂರ್ತದಲ್ಲಿ ಒಬ್ಬ ಮಗನನ್ನು ಪ್ರಸವಿಸಿದಳು.

ತಂದೆ ತಾಯಿಯರು ಆ ಕುಮಾರನಿಗೆ ಶಂಖಚೂಡನೆಂದು ಹೆಸರಿಟ್ಟು ಬಹಳ ಪ್ರೀತಿಯಿಂದ ಬೆಳೆಸಿದರು.

ಕಾಲಕ್ರಮದಲ್ಲಿ ಶಂಖಚೂಡನು ಶುಕ್ರಾಚಾರ್ಯನ ಶಿಷ್ಯನಾಗಿ ಸಕಲ ವಿದ್ಯೆಗಳನ್ನೂ ಕಲಿತನು. ಹಾಗೆ ದೊಡ್ಡವನಾದ ಮೇಲೆ ತಂದೆ ತಾಯಿಯರ ಅನುಮತಿಯಿಂದ ವಿಂಧ್ಯಪರ್ವತಕ್ಕೆ ಹೋಗಿ ಅಲ್ಲಿ ಬ್ರಹ್ಮನನ್ನು ಕುರಿತು ಬಹಳ ನಿಷ್ಠೆಯಿಂದ ತೀವ್ರವಾಗಿ ತಪಸ್ಸು ಮಾಡಿದನು. ನಿರಾಹಾರಿಯಾಗಿ ಒಂಟಿ ಕಾಲಿನ ಮೇಲೆ ನಿಂತು ಶಂಖಚೂಡನು ಮಾಡುವ ಕಠಿಣ ತಪಸ್ಸಿಗೆ ಬ್ರಹ್ಮನು ಮೆಚ್ಚಿ ಅವನ ಇದಿರಿನಲ್ಲಿ ಪ್ರತ್ಯಕ್ಷನಾಗಿ "ಅಪ್ಪಾ, ಶಂಖಚೂಡಾ ! ನಿನ್ನ ತಪಸ್ಸಿಗೆ ಮೆಚ್ಚಿದೆನು. ಬೇಕಾದ ವರವನ್ನು ಕೇಳಿಕೋ" ಎಂದನು.

"ದೇವಾ, ನಾನು ದೇವ, ರಾಕ್ಷಸ, ನಾಗ, ಮಾನವ ಗಣಗಳನ್ನು ಜಯಿಸುವ ಬಲಪರಾಕ್ರಮಗಳನ್ನು ಹೊಂದಬೇಕು. ಮೂರು ಲೋಕಗಳನ್ನೂ ಜಯಿಸಿ ಪರಿಪಾಲಿಸುವವನಾಗಬೇಕು. ಸಕಲ ಭೋಗಗಳನ್ನೂ ಅನುಭವಿಸಬೇಕು. ಇದೇ ನನಗೆ ಬೇಕಾದ ವರ" ಎಂದನು ಶಂಖಚೂಡ.

ಬ್ರಹ್ಮದೇವನು ಅವನು ಕೇಳಿದ ವರವನ್ನು ಕೊಟ್ಟು, "ಅಪ್ಪಾ, ನೀನು ಬದರಿಕಾಶ್ರಮಕ್ಕೆ ಹೋಗು. ಅಲ್ಲಿ ತುಲಸಿ ಎಂಬ ಕನ್ಯೆ ತಪಸ್ಸುಮಾಡಿಕೊಂಡಿರುವುದನ್ನು ನೋಡುವಿ. ನೀನು ಅವಳನ್ನು ಮದುವೆಯಾಗಿ ಸುಖವಾಗಿರು" ಎಂದು ಹೇಳಿ ಅದೃಶ್ಯನಾದನು.

ಬ್ರಹ್ಮನಿಂದ ವರಗಳನ್ನು ಪಡೆದ ಶಂಖಚೂಡನು ಬ್ರಹ್ಮನ ಆದೇಶದಂತೆ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ತಪಸ್ಸಿನಲ್ಲಿ ಮಗ್ನಳಾದ ತುಲಸಿ ಎಂಬ ಕನ್ಯಾಮಣಿಯನ್ನು ನೋಡಿದನು. ಅವಳ ದಿವ್ಯ ಸೌಂದರ್ಯ ರಾಶಿಯನ್ನು ನೋಡಿ ಶಂಖಚೂಡನ ಮನಸ್ಸು ಅವಳ ಮೇಲೆ ಆಕರ್ಷಣೆ ಹೊಂದಿತು.



ಅವನು ಅವಳ ಹತ್ತಿರಕ್ಕೆ ಹೋಗಿ. "ಓ ಸುಂದರೀಮಣೀ ! ನೀನು ಎಲ್ಲಿಯವಳು ? ಈ ವನದಲ್ಲಿ ಒಬ್ಬಂಟಿಗಳಾಗಿ ಏತಕ್ಕೆ ತಪಸ್ಸು ಮಾಡುವಿ?" ಎಂದು ಕೇಳಿದನು.

ತುಲಸಿ ಕೂಡಾ ಶಂಖಚೂಡನನ್ನು ನೋಡಿ. ಅವನ ಅಂದಚೆಂದಗಳಿಗೆ ಸಂತೋಷಪಡುತ್ತ, ನಸುಲಜ್ಜೆಯಿಂದ, "ನಾನು ಧರ್ಮಚೂಡನೆಂಬ ರಾಜನ ಮಗಳು. ನನ್ನ ಹೆಸರು ತುಲಸಿ. ನನಗೆ ಮಹಾ ವೀರನೇ ಪತಿಯಾಗಬೇಕೆಂದು, ನಾನು ಮಹಾ ಪತಿವ್ರತೆಯಾಗಿ ಶಾಶ್ವತ ಕೀರ್ತಿಗೆ ಭಾಜನಳಾಗಬೇಕೆಂದು ಇಷ್ಟ ದೈವವನ್ನು ನೆನೆದು ತಪಸ್ಸು ಮಾಡಿಕೊಂಡಿದ್ದೇನೆ. ನೀನು ಯಾರು ?" ಎಂದು ಕೇಳಿದಳು.

"ನಾನು ದಂಭನೆಂಬ ದಾನವರಾಜನ ಮಗನು. ಶಂಖಚೂಡನೆಂಬುದು ನನ್ನ ಹೆಸರು. ನಾನು ತೀವ್ರವಾಗಿ ತಪಸ್ಸನ್ನು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ತ್ರಿಲೋಕಾಧಿಪತಿಯಾಗುವಂತೆ ವರವನ್ನು ಪಡೆದಿದ್ದೇನೆ. ನಿನ್ನನ್ನು ಮದುವೆ ಮಾಡಿಕೊಳ್ಳುವಂತೆ ಬ್ರಹ್ಮನು ಅಪ್ಪಣೆ ಮಾಡಿದುದರಿಂದಲೇ ನಾನು ಇಲ್ಲಿಗೆ ಬಂದೆನು. ಆದುದರಿಂದ ನಿನ್ನ ಇಷ್ಟದಂತಹ ವರನು ನಾನೇ ಆಗಿರುವೆನೆಂದು ತಿಳಿದು, ನನ್ನ ಪತ್ನಿಯಾಗಲು ಒಪ್ಪಿಕೊಂಡುಬಿಡು" ಎಂದನು ಶಂಖಚೂಡ.

ಅವರಿಬ್ಬರೂ ಆಗಲೇ ಗಾಂಧರ್ವ ವಿಧಿಯಂತೆ ಮದುವೆಯಾಗಿ, ಬೆಟ್ಟಗಳಲ್ಲಿ, ನದೀತೀರಗಳಲ್ಲಿ, ವನಗಳಲ್ಲಿ ಸ್ವಲ್ಪಕಾಲದವರೆಗೆ ವಿಹರಿಸಿ, ತರುವಾಯ ಶಂಖಚೂಡನು ಅವಳೊಂದಿಗೆ ತನ್ನ ಮನೆಗೆ ಹೋದನು. ತಂದೆ ತಾಯಿಯರೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಆಗ ಗುರು ಶುಕ್ರಾಚಾರ್ಯನೂ ಅಲ್ಲಿದ್ದು ಶಂಖಚೂಡನು ಹೇಳಿದುದನ್ನೆಲ್ಲಾ ಕೇಳಿದನು. ಅವನು ಹೇಳಿದ ಶುಭಸಂಗತಿಗಳನ್ನು ಕೇಳಿ ಎಲ್ಲರಿಗೂ ಬಹಳ ಸಂತೋಷವಾಯಿತು. ಆಮೇಲೆ ಶುಕ್ರಾಚಾರ್ಯನ ಆದೇಶದಂತೆ ದಂಭನು ಶಂಖಚೂಡನಿಗೆ ಶುಭ ಮುಹೂರ್ತದಲ್ಲಿ ರಾಜ್ಯಾಭಿಷೇಕ ಮಾಡಿದನು.

ಶಂಖಚೂಡನು ತಂದೆಯಿಂದ ಪಡೆದ ರಾಜ್ಯವನ್ನೂ ಶುಕ್ರಾಚಾರ್ಯನ ಸಲಹೆಗಳ ಪ್ರಕಾರ ಒಳ್ಳೆಯ ರೀತಿಯಲ್ಲಿ ಪರಿಪಾಲಿಸುತ್ತ ದಾನವರಾಜಶ್ರೇಷ್ಠನೆಂಬ ಕೀರ್ತಿಯನ್ನು ಸಂಪಾದಿಸಿಕೊಂಡನು.

ಹೀಗೆ ಅವನು ಪರಿಪಾಲನೆ ಸಾಗಿಸಿಕೊಂಡಿರುವಾಗ, ಒಂದು ದಿನ ಕೆಲಮಂದಿ ದಾನವ ಪ್ರಮುಖರೂ, ಶುಕ್ರಾಚಾರ್ಯನೂ ಕೂಡಿ ಬಂದು ಅವನೊಂದಿಗೆ, "ರಾಜಾ, ಬ್ರಹ್ಮನು ನಿನಗೆ ಅಪೂರ್ವವಾದ ವರಗಳನ್ನು ಕೊಟ್ಟಿರುವನಲ್ಲವೆ ? ನಮ್ಮ ಪೂರ್ವಿಕರಿಗೆ ದೇವೇಂದ್ರನೇ ಮೊದಲಾದವರು ಅನೇಕ ಬಗೆಯ ದ್ರೋಹಗಳನ್ನು ಮಾಡಿದ್ದಾರೆ. ಅದಕ್ಕೆಲ್ಲ ಪ್ರತೀಕಾರ ಮಾಡಬೇಕಾದ ಬಾಧ್ಯತೆ

ನಿನ್ನ ಮೇಲೆ ಬಿದ್ದಿದೆ. ಇದು ನಿನ್ನ ಕರ್ತವ್ಯ ಕೂಡಾ. ಮೊದಲು ನೀನು ಸೇನೆಗಳೊಂದಿಗೆ ಹೋಗಿ ಸ್ವರ್ಗಕ್ಕೆ ಮುತ್ತಿಗೆ ಹಾಕಿ ದೇವತೆಗಳನ್ನು ಓಡಿಸಿ ಸ್ವರ್ಗ ವನ್ನು ವಶಪಡಿಸಿಕೊಳ್ಳಬೇಕು. ಆಮೇಲೆ ಮುಂದಿನ ಕಾರ್ಯ ನಿನಗೇ ತಿಳಿಯುತ್ತದೆ" ಎಂದು ಹಿತ ನುಡಿಯನ್ನು ಹೇಳಿದರು.

ಶಂಖಚೂಡನು ಅವರು ಹೇಳಿದಂತೆಯೇ ಮಾಡ ಬೇಕೆಂದು ನಿಶ್ಚಯಿಸಿಕೊಂಡನು. ಆ ದಿಗ್ವಿಜಯ ಕಾರ್ಯಕ್ಕೆ ಹೊರಡಲು ಒಳ್ಳೆಯ ಮುಹೂರ್ತ ನೋಡುವಂತೆ ಶುಕ್ರಾಚಾರ್ಯನಿಗೆ ಹೇಳಿ, ಆ ಮುಹೂರ್ತದಲ್ಲಿ ತನ್ನ ಸೇನೆಗಳನ್ನು ಸಾಗಿಸಿ ಕೊಂಡು ಹೋಗಿ ಸ್ವರ್ಗಲೋಕವನ್ನು ಮುತ್ತಿದನು.



ಶಂಖಚೂಡನು ಸ್ವರ್ಗದ ಕಡೆಗೆ ದಂಡೆತ್ತಿ ಕೊಂಡು ಬರುವನೆಂಬ ವಾರ್ತೆ ಚಾರರ ಮೂಲಕ ದೇವೇಂದ್ರನು ಮುಂದಾಗಿಯೇ ಕೇಳಿ. ಕುಮಾರ ಸ್ವಾಮಿಯನ್ನೂ, ದೇವಗಣಗಳನ್ನೂ ಕರೆಯಿಸಿ, ಅವರೊಂದಿಗೆ ತಾನು ಕೂಡಾ ಯುದ್ಧಕ್ಕೆ ಸಿದ್ಧ ನಾಗಿ ನಿಂತನು.

ದೇವಗಣಗಳಿಗೂ, ದಾನವಗಣಗಳಿಗೂ ನಲು ವತ್ತು ದಿನಗಳ ವರೆಗೆ ಅಹೋರಾತ್ರಿ ಎಡೆಬಿಡದೆ ದಾರುಣವಾದ ಯುದ್ಧವು ನಡೆಯಿತು. ಕಡೆಗೆ ಯುದ್ಧದಲ್ಲಿ ಹಿಮ್ಮೆಟ್ಟಬೇಕಾದ ಅಗತ್ಯ ದೇವಗಣ ಗಳಲ್ಲಿ ಕಂಡುಬರತೊಡಗಿತು. ದಾನವರಲ್ಲಿ ಇನ್ನೂ ಇನ್ನೂ ಮುನ್ನುಗ್ಗುವ ಉತ್ಸಾಹವೂ ಆವೇಶವೂ ಹೆಚ್ಚಾಗಿಯೇ ಕಂಡಿತು. ಹೀಗೆ ದಾನವರು ಮೇಲೆ ಮೇಲೆ ವಿಜೃಂಭಿಸಿಕೊಂಡು ಬರುವಾಗ ದೇವತೆಗಳು ಓಡಿ ಹೋಗಲಿಕ್ಕೂ ತೊಡಗಿದರು. ರಾಕ್ಷಸರಲ್ಲಿ ವಿಜಯದ ಉತ್ಸಾಹ!

ಇದನ್ನು ನೋಡಿದ ಮೇಲೆ ಇಂದ್ರನು ತನಗೆ ವಿಜಯವು ಸಾಧ್ಯವಿಲ್ಲವೆಂಬುದನ್ನು ತಿಳಿದು, ಶಂಖ ಚೂಡನಿಗೆ ಬ್ರಹ್ಮನು ಕೊಟ್ಟ ವರಗಳನ್ನೂ ನೆನಪಿಗೆ ತಂದುಕೊಂಡು, ದೇವತೆಗಳಿಗೆಲ್ಲಾ ಯುದ್ಧದಿಂದ ಹಿಂದಿರುಗುವಂತೆ ಹೇಳಿ, ತಾನೇ ಸ್ವತಃ ಶಂಖ ಚೂಡನ ಹತ್ತಿರ ಹೋಗಿ, "ಶಂಖಚೂಡಾ, ನೀನು ಕಶ್ಯಪ ಮಹರ್ಷಿಯ ಸಂತತಿಯವನು. ನಿನ್ನ ಶೌರ್ಯ ಬಲ ಪರಾಕ್ರಮಗಳಿಗೆ ತುಂಬಾ ಸಂತೋಷಿ ಸುತ್ತೇನೆ. ಇನ್ನುಮೇಲೆ ಯುದ್ಧಬೇಡ. ನೀನೇ ತ್ರಿಲೋಕಗಳನ್ನೂ ಪಾಲಿಸು. ನಾವೆಲ್ಲಾ ನಿನಗೆ ಸಹಾಯ ಮಾಡುತ್ತೇವೆ" ಎಂದನು.

ಶಂಖಚೂಡನು ಅದಕ್ಕೆ ಒಪ್ಪಿಕೊಂಡು, "ದೇವೇಂದ್ರಾ, ನೀನೇ ನನ್ನ ಪ್ರತಿನಿಧಿಯಾಗಿ ಸ್ವರ್ಗದಲ್ಲಿದ್ದು, ನನ್ನ ಆಜ್ಞೆಗೆ ಒಳಪಟ್ಟು ಪರಿಪಾಲನೆ ನಡೆಸು" ಎಂದನು. ಆಮೇಲೆ ಶಂಖಚೂಡನು ತಾನೇ ತ್ರಿಲೋಕಾಧಿಪತಿ ಎಂದು ಪ್ರಕಟಿಸಿ, ತನ್ನ ರಾಜಧಾನಿಯಾದ ಶೋಣಿತಪುರಕ್ಕೆ ಹಿಂದಿರುಗಿ ಅಲ್ಲಿಯೇ ಇದ್ದು ಮೂರು ಲೋಕಗಳನ್ನೂ ಆಳಲು ತೊಡಗಿದನು. ದೇವೇಂದ್ರನೇ ಮೊದಲಾದವರು

ದಿನಾ ಅವನನ್ನು ಸೇವಿಸುತ್ತ, ಅವನ ಆಜ್ಞೆಗಳನ್ನು ಪಾಲನೆ ಮಾಡಿಕೊಂಡಿದ್ದರು.

ಆದರೆ ಯಜ್ಞಯಾಗಗಳನ್ನು ಮಾಡುವವರು ಹವಿರ್ಭಾಗಗಳನ್ನು ಇನ್ನೂ ದೇವೇಂದ್ರನೇ ಮೊದಲಾದ ದೇವತೆಗಳಿಗೇ ಕೊಡುತ್ತಿದ್ದರು. ಅದನ್ನು ತಿಳಿದು ಶಂಖಚೂಡನು ಆ ಹವಿರ್ಭಾಗಗಳನ್ನು ದಾನವರಿಗೆ ಕೊಡಬೇಕೆಂದು ಋಷಿಗಳನ್ನೂ ಬ್ರಾಹ್ಮಣರನ್ನೂ ಬಲವಂತಪಡಿಸತೊಡಗಿದನು. ಅದಕ್ಕಾಗಿ ಶಂಖಚೂಡನ ದಾನವ ಭಟರು ಅಲ್ಲಲ್ಲಿ ತಿರುಗುತ್ತಾ ಋಷಿಗಳನ್ನು ಓಡಿಸಿ ಯಜ್ಞಯಾಗಗಳನ್ನು ಧ್ವಂಸ ಮಾಡಲು ಪ್ರಾರಂಭಿಸಿದರು.

ಈ ಕಾಟಗಳನ್ನು ತಾಳಲಾಗದೆ ಋಷಿಗಳೆಲ್ಲಾ ಮಹಾವಿಷ್ಣುವಿನ ಬಳಿಗೆ ಹೋಗಿ, "ಶಂಖಚೂಡನನ್ನು ಸಂಹರಿಸಿ ನಮ್ಮನ್ನು ಕಾಪಾಡಬೇಕು" ಎಂದು ಮೊರೆಯಿಟ್ಟುಕೊಂಡರು.

"ಶಂಖಚೂಡನು ನನ್ನ ಅಂಶದಿಂದಲೇ ಹುಟ್ಟಿದವನು. ಅವನ ಹೆಂಡತಿ ತುಲಸಿ ಲಕ್ಷ್ಮಿಯ ಅಂಶದಿಂದ ಹುಟ್ಟಿದ್ದಾಳೆ. ಆದುದರಿಂದ ನಾನು ಶಂಖಚೂಡನನ್ನು ಕೊಲ್ಲಲಾರೆನು. ನೀವು ಶಿವನ ಹತ್ತಿರ ಹೋಗಿ ಕೇಳಿಕೊಳ್ಳಿರಿ" ಎಂದನು ವಿಷ್ಣು.

ಋಷಿಗಳೆಲ್ಲಾ ಕೈಲಾಸಕ್ಕೆ ಹೋಗಿ, ತಮ್ಮನ್ನು ಶಂಖಚೂಡನ ಬಾಧೆಗಳಿಂದ ರಕ್ಷಿಸಬೇಕೆಂದು ಶಿವನಲ್ಲಿ ಬೇಡಿಕೊಂಡರು. ಶಿವನು ತಾನು ಶಂಖಚೂಡನೇ ಮೊದಲಾದ ದಾನವರನ್ನೆಲ್ಲ ಕೊಂದು, ಅವರ ಕಷ್ಟಗಳನ್ನು ಪರಿಹರಿಸುವುದಾಗಿ ಅಭಯವಚನವಿತ್ತು, ಅವರನ್ನೆಲ್ಲ ಕಳುಹಿಸಿದನು.

ಈ ಸಂಗತಿಯನ್ನು ತಿಳಿದು ನಾರದನು ಶಂಖಚೂಡನ ಬಳಿಗೆ ಹೋಗಿ, "ಶಂಖಚೂಡಾ, ನಿನ್ನನ್ನು ಕೊಲ್ಲುವುದಾಗಿ ಶಿವನು ಋಷಿಗಳಿಗೆ ಮಾತುಕೊಟ್ಟಿದ್ದಾನೆ. ಅವನು ಹಠಾತ್ತಾಗಿ ರುದ್ರಗಣಗಳೊಂದಿಗೆ ಬಂದು ನಿನ್ನ ಮೇಲೆ ಬೀಳುವ ಸಾಧ್ಯತೆಯಿದೆ. ನೀನು ಸುಮ್ಮನಿರದೆ, ಮೊದಲೇ ಸರ್ವ ಸೈನ್ಯದೊಂದಿಗೆ ಹೋಗಿ ಕೈಲಾಸವನ್ನು ಮುತ್ತಿ ಶಿವನನ್ನು ಅಲ್ಲೇ ತಟಸ್ಥಗೊಳಿಸುವುದು ಒಳ್ಳೆಯದು" ಎಂದು ಸಲಹೆ ಮಾಡಿ ಹೊರಟು ಹೋದನು.

ಶಂಖಚೂಡನು ನಾರದನ ಮಾತಿನ ಪ್ರಕಾರವೇ ಮಾಡುವುದು ಒಳಿತೆಂದು ಭಾವಿಸಿ, ತನ್ನ ಸೇನೆಯೊಂದಿಗೆ ಹೋಗಿ ಕೈಲಾಸವನ್ನು ಮುತ್ತಿಗೆ ಹಾಕಿದನು. ಅದನ್ನು ನೋಡಿ ಶಿವನು ಅವನೊಂದಿಗೆ ಯುದ್ಧ ಮಾಡಲು ಭದ್ರಕಾಳಿಯನ್ನೂ, ವೀರಭದ್ರಗಣಗಳನ್ನೂ, ಕುಮಾರಗಣಗಳನ್ನೂ ನಂದಿಯ ಮೂಲಕ ತನ್ನ ಬಳಿಗೆ ಕರೆಯಿಸಿದನು. ಹಾಗೆ ಶಿವನ ಆಜ್ಞೆಯಂತೆ ರುದ್ರಗಣಗಳಿಗೂ ದಾನವ ಸೇನೆಗಳಿಗೂ ದೊಡ್ಡ ಯುದ್ಧವು ಪ್ರಾರಂಭವಾಯಿತು.





# ವಜೀರರ ತಂತ್ರ

ಹಿಂದೆ ಒಬ್ಬಾನೊಬ್ಬ ಸಲ್ತಾನನ ದರಬಾರಿನಲ್ಲಿ ಹತ್ತು ಮಂದಿ ವಜೀರರಿದ್ದರು. ಅವರೆಲ್ಲರ ದೃಷ್ಟಿ ಯಾವಾಗಲೂ ಸುಲ್ತಾನನ ಖಜಾನೆಯಿಂದ ಬರುವ ಹಣದ ಮೇಲೆಯೇ ಇದ್ದಿತು, ಸ್ವಾರ್ಥಕ್ಕಾಗಿ ಪ್ರಜೆಗಳನ್ನು ಪೀಡಿಸುವ ಆಲೋಚನೆಯಲ್ಲೇ ಮಗ್ನರಾಗಿರುವರು. ಈ ಕಾರಣದಿಂದಾಗಿ ಬಹು ಬೇಗದಲ್ಲೇ ರಾಜ್ಯದ ಪರಿಪಾಲನೆಯಲ್ಲಿ ತುಂಬಾ ಏರುಪೇರುಗಳುಂಟಾಗಿ ಕುಂಟತೊಡಗಿತು.

ಈ ಸಂದರ್ಭವನ್ನು ವ್ಯರ್ಥಗೊಳಿಸದೆ ನೆರೆಯ ರಾಜನು ಈ ಸುಲ್ತಾನನ ಮೇಲೆ ದಾಳಿ ತೆಗೆದನು. ಆಗ ಕೆಲಮಂದಿ ವಜೀರರು ಆ ಶತ್ರುರಾಜನೊಂದಿಗೆ ರಹಸ್ಯವಾಗಿ ಕೈಕೂಡಿಸಿದರು.

ತನ್ನ ಕೋಟೆ ಅವರ ವಶಕ್ಕೆ ಹೋದ ಮೇಲೆಯೇ ಸುಲ್ತಾನನಿಗೆ ಆ ಶತ್ರು ದಾಳಿಯ ವಿಷಯ ಗೊತ್ತಾದುದು. ಆಮೇಲೆ ಏನೂ ಮಾಡಲಾಗದೆ ಸುಲ್ತಾನನು ಹೆಂಡತಿಯನ್ನೂ, ಎರಡು ವಯಸ್ಸಿನ ಮಗನನ್ನೂ ಕರೆದುಕೊಂಡು ರಹಸ್ಯ ಮಾರ್ಗದಿಂದ ಕೋಟೆಯನ್ನು ಬಿಟ್ಟು ಕುದುರೆಯ ಮೇಲೆ ಓಡಿಹೋದನು.

ಒಂದು ರಾತ್ರಿಯೂ ಒಂದು ಹಗಲೂ ಪ್ರಯಾಣ ಮಾಡಿದ ಮೇಲೆ ಸುಲ್ತಾನನೂ ಅವನ ಹೆಂಡತಿಯೂ ಮರುಭೂಮಿಯ ಬದಿಯಲ್ಲಿದ್ದೊಂದು ಕಲ್ಲುಗಳ ಗುಡ್ಡವನ್ನು ಸೇರಿ, ಅದರ ಹತ್ತಿರವಿದ್ದ ಕೊರೆಯ ನೀರನ್ನು ಕುಡಿದು ಅಲ್ಲಿಯೇ ಕುಳಿತು ದಣಿವಾರಿಸಿಕೊಳ್ಳ ತೊಡಗಿದರು.

ಆಗ ಅವರಿಗೆ ಓಡುತ್ತಾ ಬರುವ ಕುದುರೆಗಳ ಖುರಪುಟ ಧ್ವನಿಗಳು ಕೇಳತೊಡಗಿತು. ಆ ಕ್ಷಣದಲ್ಲಿ ಏನು ಮಾಡಬೇಕೆಂದು ತೋರದೆ ಸುಲ್ತಾನನು ಮಗುವನ್ನು ಅಲ್ಲೇ ಬಿಟ್ಟು, ಹೆಂಡತಿಯನ್ನು ಕೈ ಹಿಡಿದು ಎಳೆದುಕೊಂಡು ದಟ್ಟವಾದ ಪೊದರುಗಳ ಮರೆಗೆ ಹೋಗಿ ಅಡಗಿದನು. ಓಡಿ ಬರುವವರು ಡಕಾಯಿತರಾದರೂ, ಶತ್ರು ಸೈನಿಕರಾದರೂ ಹಸುಕಂದನನ್ನು ಏನೂ ಮಾಡಲಾರರೆಂದು ಅವನು ಭಾವಿಸಿದನು. ಅಲ್ಲದೆ ಮಗುವನ್ನು ಎತ್ತಿಕೊಂಡು ಹೋದರೆ ಮಗು ಅತ್ತು, ತಾವು ಅಡಗಿರುವುದನ್ನು ಬಹಿರಂಗಪಡಿಸುವುದೆಂದು ಭಯವೂ ಆಯಿತು.

ಆದರೆ ನಡೆದುದೇ ಬೇರೆ! ನೋಡುತ್ತಿದ್ದ ಹಾಗೆ ಕುದುರೆಗಳ ಮೇಲೆ ಒಂದು ಕೊಳ್ಳೇಗಾರರ

**ಅರೇಬಿಯಾ ಕಥೆ**



ಗುಂಪು ಆ ಸ್ಥಳಕ್ಕೆ ಬಂದಿತು. ನಿರ್ಮಾನುಷ್ಯವಾದ ಆ ಸ್ಥಳದಲ್ಲಿ ಹಸುಮಗುವನ್ನು ನೋಡಿದ ಕೂಡಲೇ ಅವರ ನಾಯಕನು ಅತ್ಯಂತ ಸಂತೋಷವನ್ನು ವ್ಯಕ್ತಪಡಿಸಿ ಆ ಮಗುವನ್ನು ಎತ್ತಿಕೊಂಡು ಹೊರಟು ಹೋದನು.

ಸುಲ್ತಾನನೂ ಅವನ ಹೆಂಡತಿಯೂ ಪೊದರುಗಳ ಮರೆಯಿಂದ ಈಚೆಗೆ ಬಂದು ಅಲ್ಲಿ ತಮ್ಮ ಮಗುವನ್ನು ಕಾಣದೆ ದಿಗ್ಭ್ರಾಂತರಾದರು. ಸುಲ್ತಾನನ ಹೆಂಡತಿಯಂತೂ ಭೋರಿಟ್ಟು ರೋದಿಸತೊಡಗಿದಳು. ಸುಲ್ತಾನನು ಅವಳಿಗೆ ಸಮಾಧಾನ ಹೇಳುತ್ತ, "ನಾವು ಕೂಡಾ ಇನ್ನೆಷ್ಟು ಕಾಲ ಬದುಕಿರುತ್ತೇವೋ ನಮಗೇ ಗೊತ್ತಿಲ್ಲ. ಈ ದುಸ್ಥಿತಿಯಲ್ಲಿ ನಮ್ಮ ಮಗನನ್ನು ಯಾರೋ ಎತ್ತಿಕೊಂಡು ಹೋಗಿದ್ದಾರೆ. ಎಲ್ಲಿಯೋ ಒಂದು ಕಡೆಯಲ್ಲಿ ನಮ್ಮ ಮಗನು ಕ್ಷೇಮವಾಗಿರುತ್ತಾನೆಂದು ನಂಬಿ ದೇವರನ್ನು ಪ್ರಾರ್ಥಿಸುವುದರ ಹೊರತು ಈಗ ನಾವು ಮತ್ತೇನೂ ಮಾಡಲು ಸಾಧ್ಯವಿಲ್ಲ" ಎಂದು ಹೆಂಡತಿಗೆ ಎಷ್ಟೋ ಹೇಳಿದನು.

ಮತ್ತೆ ಕೆಲವು ದಿನಗಳ ಮೇಲೆ ಆ ದಂಪತಿಗಳು ತಮ್ಮ ಬಂಧುಗಳೊಬ್ಬರ ಮನೆಗೆ ಹೋಗಿ ಸೇರಿದರು. ಆ ಬಂಧು ಕೂಡಾ ದೊಡ್ಡ ಸೈನ್ಯವಿರುವ ಒಬ್ಬ ಸುಲ್ತಾನನೇ. ಕೆಲವುದಿನ ಕಳೆದ ಮೇಲೆ ಸುಲ್ತಾನನು ಒಳ್ಳೆಯ ಸಮಯ ನೋಡಿ ಬಂಧು ಸುಲ್ತಾನನು ಸಹಾಯವಾಗಿ ಕೊಟ್ಟ ಸೈನ್ಯದೊಂದಿಗೆ ಹೊರಟು, ಶತ್ರುರಾಜನನ್ನು ಯುದ್ಧದಲ್ಲಿ ಕೊಂದು ಮತ್ತೆ ತನ್ನ ರಾಜ್ಯವನ್ನೂ, ಕೋಟೆಯನ್ನೂ ಕೈವಶಪಡಿಸಿಕೊಂಡನು. ಆ ಸಮಯದಲ್ಲಿ ಅವನಿಗೆ ಮಗನ ನೆನಪಾಗ ತೊಡಗಿತು.

ಹೀಗೆ ಒಳ್ಳೆಯ ಸ್ಥಿತಿಗೆ ಬಂದ ಮೇಲೆ, ಸುಲ್ತಾನನು ಮಾರ್ಗ ಮಧ್ಯದಲ್ಲಿ ಕಳೆದುಕೊಂಡ ಮಗನನ್ನು ಹುಡುಕಿಸಲು ಎಷ್ಟೋ ಪ್ರಯತ್ನ ಮಾಡಿದನು. ಪ್ರಯೋಜನವೇನೂ ಆಗಲಿಲ್ಲ.

ಹೀಗಿರುವಾಗ ಒಂದುಸಾರಿ ಕೆಲಮಂದಿ ವ್ಯಾಪಾರಿಗಳು ಒಂಟೆಗಳ ಮೇಲೆ ಮರುಭೂಮಿಯ ದಾರಿಯಲ್ಲಿ ಹೋಗುತ್ತಿದ್ದರು. ಆಗ ಒಂದು ಕಡೆಯಲ್ಲಿ ದಾರಿದೋಚುವ ಕೊಳ್ಳೆಗಾರರ ಗುಂಪು ಅವರ ಮೇಲೆ ಬಿದ್ದಿತು. ವ್ಯಾಪಾರಿಗಳು ಅವರೊಂದಿಗೆ ಬಹು ಜೋರಿನಿಂದ ಹೋರಾಟ ನಡೆಸಿದರು. ಎರಡು ಪಕ್ಷಗಳಲ್ಲಿಯೂ ಕೆಲವರು ಸತ್ತರು. ಆದರೂ ವ್ಯಾಪಾರಿಗಳು ಕೆಲವು ಮಂದಿ ಕಳ್ಳರನ್ನು ಹಿಡಿದುಕಟ್ಟಿ ಎಳೆದುಕೊಂಡು ಸುಲ್ತಾನನ ಮುಂದೆ ಒಯ್ದು ನಿಲ್ಲಿಸಿದರು.

ವ್ಯಾಪಾರಿಗಳ ಧೈರ್ಯ ಸಾಹಸಗಳಿಗೆ ಸುಲ್ತಾನನು ಬಹಳವಾಗಿ ಮೆಚ್ಚಿಕೊಂಡು, ಅವರಿಗೆ ಉತ್ತಮವಾದ ಕಾಣಿಕೆಗಳನ್ನು ಕೊಟ್ಟು, ಕಳ್ಳರಿಗೆ ಮರಣದಂಡನೆ ವಿಧಿಸಿದನು. ಆದರಂತೆ ಕಳ್ಳರನ್ನು ರಾಜಭಟರು ವಧ್ಯ ಸ್ಥಾನಕ್ಕೆ ಎಳೆದುಕೊಂಡು

ಹೋಗುತ್ತಿದ್ದಾಗ, ಸುಲ್ತಾನನ ದೃಷ್ಟಿ ಯುವಕನಾಗಿದ್ದ ಒಬ್ಬ ಕಳ್ಳನ ಮೇಲೆ ಬಿತ್ತು. ಆ ಯುವಕನ ಅಂದಚೆಂದವಾದ ರೂಪರೇಖೆಗಳೂ, ಒಳ್ಳೆಯ ಲಕ್ಷಣಗಳೂ ಅವನನ್ನು ಆಕರ್ಷಣೆ ಮಾಡಿದುವು. ಆ ಯುವಕನನ್ನು ಹತ್ತಿರ ಕರೆದು "ಯಾರು ನೀನು? ನಿನ್ನ ಹೆಸರೇನು?" ಎಂದು ಕೇಳಿದನು ಸುಲ್ತಾನ.



"ನಾನು ಈ ಕೊಳ್ಳೇ ಗುಂಪಿನ ನಾಯಕನ ಮಗ. ನನ್ನ ಹೆಸರು ಅಜರುದ್ದೀನ್" ಎಂದನು ಆ ಯುವಕ.

"ನನ್ನ ಆಸ್ಥಾನದಲ್ಲಿ ನಿನಗೆ ಉದ್ಯೋಗ ಕೊಡುತ್ತೇನೆ. ಒಳ್ಳೆಯವನಾಗಿ ಕೆಲಸ ಮಾಡಿಕೊಂಡಿರುತ್ತೀಯಾ?" ಎಂದು ಸುಲ್ತಾನನು ಕೇಳಿದನು.

"ಮಾಡುತ್ತೇನೆ. ಇನ್ನು ಮೇಲೆ ಈ ಕೊಳ್ಳೇ ಸುಲಿಗೆಗಳ ತಂಟೆಗೇ ಹೋಗಲಾರೆ. ನಿಮ್ಮ ದಯೆಗೆ ಪಾತ್ರನಾಗಿಯೇ ಇರುತ್ತೇನೆ. ಅಪ್ಪನ ಒತ್ತಾಯದಿಂದಲೇ ನಾನು ಹೀಗೆಲ್ಲಾ ಮಾಡಬೇಕಾಯಿತು" ಎಂದನು ಅಜರುದ್ದೀನ್.

ಅಜರುದ್ದೀನ್ ಸುಲ್ತಾನನ ಆಸ್ಥಾನದಲ್ಲಿ ಉದ್ಯೋಗಕ್ಕೆ ಸೇರಿ ಬಹು ಬೇಗದಲ್ಲೇ ಸುಲ್ತಾನನ ಪ್ರೇಮಕ್ಕೆ ಪಾತ್ರನಾದನು. ಕರ್ತವ್ಯಗಳನ್ನು ನಿರ್ವಹಿಸುವುದರಲ್ಲಿ ಅವನು ಇತರರಿಗೆ ಆದರ್ಶಪ್ರಾಯನಾಗಿ ಬೆಳಗತೊಡಗಿದನು. ಕ್ರಮಕ್ರಮವಾಗಿ ಸುಲ್ತಾನನ ವಿಶ್ವಾಸಕ್ಕೆ ಗಟ್ಟಿಯಾದ ಪಾತ್ರನಾಗಿ ಕೋಶಾಧಿಕಾರಿಯ ಪದವಿಗೆ ಏರಿದನು. ತಕ್ಕ ಕಾರಣ ತೋರಿಸಿ ಅವನ ಅನುಮತಿ ಪಡೆಯದೆ ಖಜಾನೆಯಿಂದ ಒಂದು ಒಡಕುಕಾಸನ್ನು ಕೂಡಾ ತೆಗೆಯಲು ಸಾಧ್ಯವಿರಲಿಲ್ಲ.

ಮುದುಕರಾಗಿ ಹೋದ ವಜೀರರಿಗೆ ಈ ಪರಿಸ್ಥಿತಿ ತುಂಬ ಚಿಂತೆಯನ್ನುಂಟುಮಾಡಿತು. ಇದುವರೆಗೆ ಅವರು ಸುಲ್ತಾನನ ಖಜಾನೆಯನ್ನು ತಮ್ಮ ಸ್ವಂತ ಖಜಾನೆಯ ಹಾಗೆ ಭಾವಿಸಿ, ತಮಗೆ ಬೇಕಾದಾಗಲೆಲ್ಲಾ ಧನವನ್ನು ತೆಗೆದುಕೊಂಡು ಇಷ್ಟಾನುಸಾರವಾಗಿ ಖರ್ಚು ಮಾಡಿಕೊಂಡಿದ್ದವರು. ಈಗ ಅಜರುದ್ದೀನನಿಗೆ ಅಧಿಕಾರ ಬಂದ ಮೇಲೆ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಹೇಗಾದರೂ ಈ ಅಜರುದ್ದೀನನ ಅಡ್ಡವನ್ನು ತೊಲಗಿಸಬೇಕೆಂದು ಆ ವಜೀರರು ಆಲೋಚನೆ ಮಾಡಲು ತೊಡಗಿದರು.

ಸುಲ್ತಾನನು ಭವನದಲ್ಲಿಲ್ಲದ ಸಮಯ ನೋಡಿ ಅಜರುದ್ದೀನನನ್ನು ಔತಣಕ್ಕೆ ಆಹ್ವಾನ ಮಾಡಿದರು. ಔತಣದೂಟಗಳೆಲ್ಲ ಮುಗಿದ ಮೇಲೆ ಅಜರುದ್ದೀನನಿಗೆ ಮೈ ಮರೆಯುವಂತೆ ದ್ರಾಕ್ಷಾ ಪಾನೀಯವನ್ನು ಕುಡಿಸಿದರು. ಆ ಕಾರಣದಿಂದ ಅವನು ಬೋಧವಿಲ್ಲದಂತಿರುವಾಗ ವಜೀರರು ಅವನನ್ನು ಹೊತ್ತುಕೊಂಡು ಹೋಗಿ ಸುಲ್ತಾನನ ಶಯನ ಮಂದಿರದೊಳಗೆ ಹಾಸಿಗೆಯಲ್ಲಿ ಮಲಗಿಸಿ ಹೋಗಿಬಿಟ್ಟರು. ಯಾವ ನೌಕರರಿಗೂ ಗೊತ್ತಾಗದಂತೆ ಈ ಕೆಲಸ ಮಾಡಿಬಿಟ್ಟರು.



ಅರ್ಧರಾತ್ರಿ ದಾಟಿದ ಮೇಲೆ ಸುಲ್ತಾನನು ತನ್ನ ಶಯನಮಂದಿರಕ್ಕೆ ಬಂದು, ತನ್ನ ಹಾಸಿಗೆಯ ಮೇಲೆ ಯಾವನೋ ಮಲಗಿರುವುದನ್ನು ನೋಡಿ ಕೋಪಾವೇಶಕ್ಕೊಳಗಾದನು. ನೌಕರರನ್ನು ಕೂಗಿ ಕರೆದು ಅಲ್ಲಿ ಮಲಗಿರುವವನು ಯಾರೆಂದು ನೋಡುವಂತೆ ಹೇಳಿದನು.

"ಯಾವನೋ ಕಂಠಮಟ ಕುಡಿದು ಎಚ್ಚರ ತಪ್ಪಿ ಬಿದ್ದಿದ್ದಾನೆ" ಎಂದರು ನೌಕರರು.

ಏನು ನಡೆಯುವುದೆಂದು ನೋಡುವ ಕುತೂಹಲದಿಂದ ಸಮೀಪದಲ್ಲೇ ಹೊಂಚಿಕೊಂಡಿದ್ದ ವಜೀರರು ಸುಲ್ತಾನನ ಹತ್ತಿರ ಬಂದು, "ಏನಿದು ? ಮಹಾ ಪ್ರಭುಗಳ ಹಾಸಿಗೆಯಲ್ಲಿ ಮುಖಮೂಗು ತಿಳಿಯದ ಯಾವನೋ ಒಬ್ಬ ಮಲಗಿದ್ದಾನೆಂದರೆ ಇದಕ್ಕಿಂತ ದೊಡ್ಡ ಅಪಮಾನ ಬೇರೆ ಇಲ್ಲ !" ಎಂದರು.

"ಆ ನೀಚನನ್ನು ಕೊಲ್ಲಿಸಿ ಬಿಡಿ !" ಎಂದನು ಸುಲ್ತಾನ ಮಹಾ ಕೋಪದಿಂದ.

"ಹೌದು. ಇದೇ ಸರಿಯಾದ ನ್ಯಾಯ !" ಎಂದನು ಪ್ರಧಾನ ವಜೀರ.

"ನಿಜ ನಿಜ" ಎಂದು ಇತರ ವಜೀರರೂ ಸಮರ್ಥಿಸಿದರು.

ಅಜರುದ್ದೀನ್ ಇನ್ನೂ ಮೂರ್ಛೆಯ ಸ್ಥಿತಿಯಲ್ಲೇ ಇದ್ದನು. ಕೆಲಮಂದಿ ನೌಕರರು ಅವನನ್ನು ಹಾಸಿಗೆಯ ಮೇಲಿನಿಂದ ಕೆಳಕ್ಕೆ ಎಳೆದರು. ವಜೀರರು ಅವನನ್ನು ನೋಡಿ, "ಓಹೋಹೊ ! ಸುಲ್ತಾನರಿಗಿಂತಲೂ ತಾನೇ ದೊಡ್ಡವನೆಂದು ಹೆಮ್ಮೆ ಹೇಳಿಕೊಳ್ಳುವ ಇವನಿಗೆ ಈಗ ತಕ್ಕ ಶಾಸ್ತಿಯಾಯಿತು ಪ್ರಭೂ" ಎಂದರು ಸಂತೋಷದಿಂದ.

ಅಜರುದ್ದೀನನ ಮುಖವನ್ನು ನೋಡಿದ ಕೂಡಲೇ ಸುಲ್ತಾನನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಆದರೂ ಆ ಪರಿಸ್ಥಿತಿಯಲ್ಲಿ ಅವನು ತನ್ನ ಆಜ್ಞೆಯನ್ನು ಹಿಂದೆಗೆದುಕೊಳ್ಳದೆ ಸುಮ್ಮನಿದ್ದುಬಿಟ್ಟನು.

ಮರುದಿನ ಸೂರ್ಯೋದಯವಾಗುವುದಕ್ಕೆ ಮೊದಲೇ ವಧ್ಯ ಸ್ಥಾನದಲ್ಲಿ ಜನರು ಬಂದು ಗುಂಪುಗೂಡ ತೊಡಗಿದರು. ಭಟರು ಅಜರುದ್ದೀನನನ್ನು ಅಲ್ಲಿಗೆ ತಂದರು.

ಆಗ ಜನರ ಗುಂಪಿನಿಂದ ಒಬ್ಬ ಮುದುಕನು ಮುಂದಕ್ಕೆ ಬಂದು, "ಓ ! ನನ್ನ ಕಂದಾ ! ನೀನು ಪ್ರಾಣದೊಂದಿಗೇ ಇರುವಿಯಾ ? ನಾನು ಇಷ್ಟು ಕಾಲದವರೆಗೆ ಬದುಕಿರುವುದು ನಿನ್ನನ್ನು ಈ ಸ್ಥಿತಿಯಲ್ಲಿ ನೋಡಲಿಕ್ಕೇನಾ !" ಎಂದು ಅಜರುದ್ದೀನನನ್ನು ಹಿಡಿದುಕೊಂಡು ಅಳತೊಡಗಿದನು.

ಆ ಸಮಯದಲ್ಲಿ ಹತ್ತು ಮಂದಿ ವಜೀರರೂ ಅಲ್ಲೇ ಇದ್ದರು. ಆ ಮುದುಕನು ಕೊಳ್ಳೆಗಾರರ ಗುಂಪಿನ ನಾಯಕನಾಗಿರಬೇಕೆಂದು ಅವರಿಗೆ ತೋರಿತು. ಕೂಡಲೇ ಪ್ರಧಾನ ವಜೀರನು ಆ ಮುದುಕನನ್ನು ಬಂಧಿಸುವಂತೆ ಆಜ್ಞೆಮಾಡಿ, ಅಲ್ಲಿಂದ ಓಡುತ್ತಾ ಸುಲ್ತಾನನ ಬಳಿಗೆ ಹೋಗಿ ಈ

ವಾರ್ತೆಯನ್ನು ಹೇಳಿದನು. ಸುಲ್ತಾನನು ಕೂಡಾ ಕುತೂಹಲದಿಂದ ವಧ್ಯ ಸ್ಥಳಕ್ಕೆ ಬಂದನು.

ಸುಲ್ತಾನನನ್ನು ನೋಡಿದ ಕೂಡಲೇ ಕಳ್ಳರ ಗುಂಪಿನ ನಾಯಕನು ಸುಲ್ತಾನನ ಪಾದಗಳ ಮುಂದೆ ಬಿದ್ದು, "ಮಹಾಪ್ರಭೂ, ಕಳ್ಳರ ನಾಯಕನಾದ ನನ್ನನ್ನು ಕೊಂದು, ನನ್ನ ಮಗನನ್ನು ಬಿಟ್ಟು ಬಿಡಿರಿ. ನನ್ನ ಮಗನು ದೇವದೂತನು. ಅವನು ದೇವರ ವರವಾಗಿ ನನಗೆ ಸಿಕ್ಕಿದ ಪ್ರಸಾದ!" ಎಂದು ಪ್ರಾರ್ಥಿಸಿದನು.

"ಆಹಾಹಾ! ಪ್ರತಿ ತಂದೆಯೂ ತನ್ನ ಮಗನನ್ನು ದೇವರ ವರಪ್ರಸಾದವೆಂದೇ ಹೇಳುತ್ತಾನೆ" ಎಂದನು ಪ್ರಧಾನ ವಜೀರ ಪರಿಹಾಸವಾಗಿ.

"ಪ್ರಭೂ, ಇವನು ದೇವದೂತನಲ್ಲದಿದ್ದರೆ ನಿರ್ಮಾನುಷ್ಯವಾದ ಕಲ್ಲುಗಳ ಗುಡ್ಡದಲ್ಲಿ ನನಗೆ ಹೇಗೆ ಸಿಗುತ್ತಾನೆ? ನೀವೆಲ್ಲರೂ ನೋಡುತ್ತಿರುವ ಅಜರುದ್ದೀನ್ ನನ್ನ ಔರಸಪುತ್ರನಲ್ಲ ಹುಜೂರ್! ಅವನು ಚಿಕ್ಕ ಮಗುವಾಗಿದ್ದಾಗಲೇ ಆ ಗುಡ್ಡದಲ್ಲಿ ಸಿಕ್ಕಿದವನು!" ಎಂದನು ಕಳ್ಳರ ನಾಯಕ ಮುದುಕ.

"ಗುಡ್ಡ ಪ್ರಾಂತದಲ್ಲಿಯೋ? ಯಾವಾಗ? ಯಾವ ಗುಡ್ಡ?" ಎಂದು ಹಿಂದಿನ ಸಂಗತಿ ನೆನೆದು ಆಶ್ಚರ್ಯಪಡುತ್ತ ಕೇಳಿದನು ಸುಲ್ತಾನ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ, ಎರಡು ವಯಸ್ಸಿನ ಶಿಶುವಾಗಿ ಅವನು ಹೇಗೆ ತನಗೆ ಸಿಕ್ಕಿದನೆಂಬುದನ್ನು ಕಳ್ಳರ ನಾಯಕನು ಹೇಳುವಾಗ, ತಾನು ಕಳೆದುಕೊಂಡ ತನ್ನ ಕುಮಾರನೇ ಅಜರುದ್ದೀನ್ ಎಂದು ಸುಲ್ತಾನನಿಗೆ ಸ್ಪಷ್ಟವಾಯಿತು. ಸುಲ್ತಾನನು ಆನಂದಬಾಷ್ಪಗಳ ಕಣ್ಣುಗಳಿಂದ ಅಜರುದ್ದೀನನನ್ನು ಗಾಢಾಲಿಂಗನ ಮಾಡಿಕೊಂಡನು. ಅವನ ಮೂಲಕ ವಜೀರರು ಔತಣದ ನೆಪದಲ್ಲಿ ಮಾಡಿದ ಮೋಸವು ಸುಲ್ತಾನನಿಗೆ ಗೊತ್ತಾಯಿತು.

"ಆ ದುಷ್ಟ ವಜೀರರನ್ನೆಲ್ಲಾ ಎತ್ತರವಾದ ಬೆಟ್ಟದ ಶಿಖರದಿಂದ ಕೆಳಕ್ಕೆ ದೂಡಿ ಕೊಲ್ಲಿರಿ!" ಎಂದು ಆಜ್ಞಾಪಿಸಿದನು ಸುಲ್ತಾನ.

"ತಂದೆಯೇ, ತಡೆಯಿರಿ. ಅವರು ಅಂತಹ ತಪ್ಪು ಮಾಡದಿರುತ್ತಿದ್ದರೆ ನಿಮಗೆ ನನ್ನ ಗುರುತು ಆಗುತ್ತಿದ್ದಿತೇ? ಅವರ ದುಸ್ತಂತ್ರಗಳು ನಮಗೆ ಒಳ್ಳೆಯದೇ ಮಾಡಿವೆ" ಎಂದನು ಅಜರುದ್ದೀನ್.

"ಹಾಗಾದರೆ ಅವರನ್ನು ಕಾರಾಗಾರದಲ್ಲಿ ಹಾಕಿರಿ. ಸಾಯುವವರೆಗೆ ಅಲ್ಲೇ ಇರಲಿ" ಎಂದು ಅಪ್ಪಣೆ ಮಾಡಿದನು ಸುಲ್ತಾನ.

ತರುವಾಯ ತಂದೆಮಗಂದಿರು ಒಂದಾಗಿ ಚಿರಕಾಲ ತಮ್ಮ ದೇಶವನ್ನು ಪ್ರಜಾರಂಜಕವಾಗಿ ಪಾಲನೆ ಮಾಡಿದರು.






(ಕಳೆದ ಸಂಚಿಕೆಯಿಂದ ಮುಂದುವರಿದುದು)

ಮಹಾರಾಜನು ದೈವಜ್ಞರನ್ನು ಕರೆಯಿಸಿ, "ನನಗೆ ಕುಮಾರನು ಹುಟ್ಟಿದಾಗ ಅವನಲ್ಲಿ ಅನೇಕ ಶುಭಲಕ್ಷಣಗಳಿರುವುದೆಂದು ಹೇಳಿದ್ದೀರಿ. ಯಾವ ಅರಿಷ್ಟಗಳೂ ಇಲ್ಲವೆಂದು ಹೇಳಿದ್ದೀರಿ. ಎಲ್ಲಾ ನಿಮ್ಮ ಮಾತಿಗೆ ವಿರುದ್ಧವಾಗಿದೆ. ನನ್ನ ಮಗನು ಹುಟ್ಟು ಕುರುಡ, ಹೆಳವ, ಕಿವುಡ, ಹುಟ್ಟು ಮೂಗ! ನಿಮ್ಮ ಮಾತುಗಳೆಲ್ಲ ಅಕ್ಷರಶಃ ಸುಳ್ಳಾಗಿವೆ. ಆ ಶುಭ ಲಕ್ಷಣಗಳೇನಾದುವು? ಇದಕ್ಕೇನು ಉತ್ತರ ಹೇಳುವಿರಿ?" ಎಂದು ಕೇಳಿದನು.

"ಮಹಾರಾಜಾ, ನೀವು ಎಷ್ಟೋ ಕಾಲದಿಂದ ಮಕ್ಕಳಿಲ್ಲದೆ, ಅನೇಕ ವ್ರತೋಪವಾಸಗಳನ್ನು ಮಾಡಿ ಈ ಮಗನನ್ನು ಪಡೆದು ಆನಂದದಲ್ಲಿರುವಾಗ, ಪುತ್ರೋತ್ಸವದ ಸಂತೋಷವನ್ನು ಕೆಡಿಸುವಂತೆ ಈ ಮಗನು ಅದೃಷ್ಟಹೀನನೆಂದು ಹೇಳಲು ನಮಗೆ ಬಾಯಿ ಬರಲಿಲ್ಲ. ಆದ್ದರಿಂದ ಸುಳ್ಳು ಹೇಳಿದೆವು" ಎಂದರು ದೈವಜ್ಞರು.

"ಸರಿ. ಹಾಗಾದರೆ ಈಗ ಏನು ಮಾಡಬೇಕೆಂದು ನಿಮ್ಮ ಅಭಿಪ್ರಾಯ? ಸ್ವಲ್ಪವೂ ಮುಚ್ಚುಮರೆಯಿಲ್ಲದೆ ಹೇಳಿಬಿಡಿರಿ" ಎಂದು ಕೇಳಿದನು ರಾಜ.

"ಅಯ್ಯಾ, ಈ ಹುಡುಗನು ಜೀವಿಸಿರುವುದರಿಂದ ನಿಮಗೂ, ಮಹಾರಾಣಿಗೂ, ನಿಮ್ಮ ರಾಜ್ಯಕ್ಕೂ ಆಪತ್ತು ತಪ್ಪುವಂತಿಲ್ಲ. ಆದುದರಿಂದ ಅಶುಭ ಲಕ್ಷಣಗಳಿರುವ ರಥಕ್ಕೆ, ಅಶುಭ ಲಕ್ಷಣಗಳಿರುವ ಕುದುರೆಗಳನ್ನು ಕಟ್ಟಿ, ಅದರಲ್ಲಿ ಈ ಹುಡುಗನನ್ನು ಕೂಡಿಸಿ ಪಶ್ಚಿಮ ದ್ವಾರದ ಮೂಲಕ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಭೂಸಮಾಧಿ ಮಾಡಿಸಿ ಬಿಡಬೇಕು. ಬೇರೆ ದಾರಿಯೇ ಇಲ್ಲ" ಎಂದರು ಆ ದೈವಜ್ಞರು.

ಅವನಿಂದ ಬರುವ ಅಪಾಯಗಳಿಗೆ ಹೆದರಿ ರಾಜನು ಹಾಗೆಯೇ ಮಾಡಲು ಅಪ್ಪಣೆ ಕೊಟ್ಟನು. ಈ ಸಂಗತಿಯನ್ನು ಕೇಳಿ ಚಂದ್ರಾದೇವಿ ರಾಜನ ಬಳಿಗೆ ಬಂದು, "ಮಹಾರಾಜರೇ, ನೀವು ನನಗೊಂದು ವರವನ್ನು ಕೊಡುವೆನೆಂದು ಅವನು ಹುಟ್ಟಿದಾಗ ವಾಗ್ದಾನ ಮಾಡಿದ್ದೀರಿ. ಈಗ ಆ ವರವನ್ನು ಕೊಟ್ಟುಬಿಡಿ" ಎಂದಳು. ಹಾಗೆಯೇ ಕೊಡುವೆನೆಂದನು ರಾಜ.

"ಹಾಗಾದರೆ ನನ್ನ ಮಗನಿಗೆ ರಾಜ್ಯಾಭಿಷೇಕ ಮಾಡಬೇಕು. ಅದೇ ನನಗೆ ಬೇಕಾದ ವರ" ಎಂದಳು ರಾಣಿ.

"ಅದು ಮಾತ್ರ ಸಾಧ್ಯವಾಗದು. ನಿನ್ನ ಮಗನು ಅರಿಷ್ಟ ಜಾತಕದವನು. ಎಲ್ಲವನ್ನೂ ನೋಡಿರುವ ನೀನು ಹಾಗೆ ಕೇಳುವುದೆಂದರೇನು? ಅವನು ರಾಜ್ಯಾಭಿಷೇಕಕ್ಕೆ ಅರ್ಹನೇ ಅಲ್ಲ!" ಎಂದನು ರಾಜ.

"ಕಡೆತನಕ ಅವನು ರಾಜನಾಗಿರದಿದ್ದರೂ ಏಳು ವರ್ಷಗಳವರೆಗೆ ಅವನು ರಾಜನಾಗಿರುವಂತೆ ಮಾಡಿ" ಎಂದಳು ರಾಣಿ.

ಅದಕ್ಕೆ ಕೂಡಾ ರಾಜನು ಒಪ್ಪಲಿಲ್ಲ. ಕಡೆಗೆ ರಾಣಿಯ ಒತ್ತಾಯಕ್ಕೆ ಮಣಿದು ಏಳು ದಿನಗಳವರೆಗೆ ಮಾತ್ರ ಮಗನನ್ನು ರಾಜನಾಗಿ ಮಾಡಲು ರಾಜನು ಒಪ್ಪಿಗೆ ಕೊಟ್ಟನು.

ಚಂದ್ರಾದೇವಿ ಕೂಡಲೇ ತನ್ನ ಕುಮಾರನಿಗೆ ಒಳ್ಳೊಳ್ಳೆಯ ವಸ್ತ್ರಾಭರಣಗಳನ್ನು ತೊಡಿಸಿ, ನಗರವನ್ನೆಲ್ಲಾ ಅಲಂಕಾರ ಮಾಡಿಸಿದಳು. ಆ ದಿನದಿಂದ ತೇಮಿಾಯ ಮಹಾರಾಜನ ಆಳ್ವಿಕೆ ಪ್ರಾರಂಭವಾಗುತ್ತದೆಂದು ಡಂಗುರ ಸಾರಿಸಲಾಯಿತು. ಪುರಜನರಿಗೆ ಇದೊಂದು ವಿಚಿತ್ರ ಸಂಭ್ರಮವೆನಿಸಿತು.

ಆ ದಿನ ಇಡೀ ರಾತ್ರಿ ಬೆಳಗಾಗುವವರೆಗೆ ಚಂದ್ರಾದೇವಿ ಮಗನ ಹತ್ತಿರವೇ ಕುಳಿತು, "ಕಂದಾ. ನಿನಗಾಗಿ ಹದಿನಾರು ವರ್ಷಗಳವರೆಗೆ ನಾನು ಕಣ್ಣಿನ ರೆಪ್ಪೆ ಮುಚ್ಚಿಲ್ಲ. ನಿನ್ನನ್ನೇ ನೆನೆದು ಅತ್ತು ಅತ್ತು ನನ್ನ ಕಣ್ಣುಗಳು ಬಾತಿವೆಯಪ್ಪಾ. ನನ್ನ ಸ್ಥಿತಿಯನ್ನು ಕಣ್ಣುಬಿಟ್ಟು ನೀನೂ ನೋಡಿರುವಿ. ನಿನ್ನಲ್ಲಿ ಯಾವ ಅವಲಕ್ಷಣವೂ ಇಲ್ಲವೆಂದು ನನಗೆ ಗೊತ್ತಿದೆ. ನನಗಾಗಿಯಾದರೂ ಎದ್ದು ಸ್ವಲ್ಪ ತಿರುಗಾಡಪ್ಪಾ. ದಯಮಾಡು ನನ್ನ ಪ್ರಿಯ ಕಂದಾ!" ಎಂದು ಅಂಗಲಾಚಿಕೊಂಡಳು. ತೇಮಿಾಯನಲ್ಲಿ ಯಾವ ಚೈತನ್ಯವೂ ಕಾಣಲಿಲ್ಲ.



ಹೀಗೆಯೇ ಆರು ದಿನಗಳು ಕಳೆದುಹೋದುವು. ರಾಜನು ತನ್ನ ಸಾರಥಿಯಾದ ಸುನಂದನನ್ನು ಕರೆದು, "ನಾಳೆಯೊಳಗೆ ಅಶುಭ ಲಕ್ಷಣಗಳ ರಥಕ್ಕೆ ಅಶುಭ ಲಕ್ಷಣಗಳ ಕುದುರೆಗಳನ್ನು ಹೂಡಿ ಸಿದ್ಧಪಡಿಸು. ಆಮೇಲೆ ತೇಮಿಾಯನನ್ನು ರಥದಲ್ಲಿ ಕೂಡಿಸಿ ಪಶ್ಚಿಮ ದ್ವಾರದ ಮೂಲಕ ಸ್ಮಶಾನಕ್ಕೆ ಸಾಗಿಸು. ಅಲ್ಲಿ ಚಚ್ಚೌಕವಾದ ದೊಡ್ಡ ಹೊಂಡವನ್ನು ತೋಡಿ ಅದರಲ್ಲಿ ತೇಮಿಾಯನನ್ನು ಹಾಕಿ ಮಣ್ಣುಮುಚ್ಚಿ, ಅವನು ನೆಲದ ಮೇಲೆ ಯಾರಿಗೂ ಕಾಣದಂತೆ ಮಾಡಿ ಸ್ನಾನಮಾಡಿ ಬಂದುಬಿಡು!" ಎಂದು ಆಜ್ಞೆಮಾಡಿದನು.

ಕೊನೆಯ ದಿನ ರಾತ್ರಿ ಚಂದ್ರಾದೇವಿ ತನ್ನ ಮಗನ ಮೇಲೆ ಬಿದ್ದು ರೋದಿಸುತ್ತ, "ಕಂದಾ. ಮಹಾರಾಜರು ನಿನ್ನ ಮರಣಕ್ಕೆ ಅಪ್ಪಣೆ ಮಾಡಿಯಾಯಿತಪ್ಪಾ. ನಿನ್ನ ಆಯುಷ್ಯ ನಾಳೆಗೆ ಮುಗಿದು ಹೋಗುತ್ತದೋ ನನ್ನ ಮಗನೇ! ಇಷ್ಟು ಚಿಕ್ಕ



ಚಂದ್ರಾದೇವಿ ತನ್ನ ಕುಮಾರನನ್ನು ಆಲಿಂಗಿಸಿ ಕೊಂಡು ಒಂದೇ ಸಮನೆ ಅಳತೊಡಗಿದಳು. ಸಾರಥಿ ಮೆಲ್ಲನೆ ಬಾಗಿ ತೇಮಿಯನನ್ನು ಅವಳ ಕೈಯಿಂದ ಬಿಡಿಸಿ, ಎತ್ತಿ ಹೊರಗೆ ತಂದು ರಥದಲ್ಲಿ ಕೂಡಿಸಿ, ಪಶ್ಚಿಮದಿಕ್ಕಿನ ದ್ವಾರದ ಕಡೆಗೆ ಹೋಗುವು ದೆಂದುಕೊಂಡು ಪೂರ್ವದಿಕ್ಕಿನ ದ್ವಾರದ ಕಡೆಗೆ ರಥವನ್ನು ನಡೆಯಿಸಿದನು. ಅವನಿಗೂ ತನ್ನ ಹಾಳು ಕೆಲಸ ಮಾಡಬೇಕಾದ ದುರ್ವಿಧಿಯನ್ನು ನೆನೆದು ದಿಕ್ಕು ತಪ್ಪಿತ್ತು !

ಆ ದ್ವಾರವನ್ನು ದಾಟಿದ ಮೇಲೆ ರಥವು ಮೂರು ಯೋಜನೆಗಳಷ್ಟು ದೂರ ನಿಲ್ಲದೆ ಹೋಯಿತು. ಅಲ್ಲಿ ಸುನಂದನಿಗೆ ಒಂದು ಕಾಡು ಪ್ರದೇಶದಲ್ಲಿ ರುದ್ರ ಭೂಮಿ ಇರುವಂತೆ ಭ್ರಮೆಯುಂಟಾಯಿತು. ಕೂಡಲೇ ಅವನು ರಥದಿಂದಿಳಿದು ತೇಮಿಯನ ಶರೀರದಲ್ಲಿರುವ ಆಭರಣಗಳನ್ನೆಲ್ಲ ಸುಲಿದು ಗಂಟು ಕಟ್ಟಿಟ್ಟನು. ಆಮೇಲೆ ಒಂದಾನೊಂದು ಜಾಗದಲ್ಲಿ ಚಚ್ಚೌಕವಾದ ಹೊಂಡವನ್ನು ಅಗೆಯತೊಡಗಿದನು. ತಾನೊಂದು ದೊಡ್ಡ ಪುಣ್ಯಕಾರ್ಯ ಮಾಡುವುದಾಗಿ ತಿಳಿದು ತನ್ನ ಕೆಲಸದಲ್ಲೇ ಮಗ್ನನಾದನು.

“ಅಬ್ಬಬ್ಬ ! ಹದಿನಾರು ವರ್ಷಗಳಿಂದ ಚಲನ ವಿಲ್ಲದ ನನ್ನ ಅವಯವಗಳಿಗೆ ಈಗ ಕೆಲಸ ತಗಲಿತು” ಎಂದುಕೊಂಡು ಬೋಧಿಸತ್ವನು ಎದ್ದು ನಿಂತು ತನ್ನ ಕೈಗಳನ್ನು ಉಜ್ಜಿಕೊಂಡನು. ಕೈಗಳಿಂದ ಕಾಲುಗಳನ್ನೂ ತಿಕ್ಕಿಕೊಂಡನು. ರಥದಿಂದಿಳಿದು ಆಚೆಗೂ ಈಚೆಗೂ ನಡೆದು ನೋಡಿಕೊಂಡನು. ತನಗೆ ಎಷ್ಟು ಶಕ್ತಿಯಿದೆ ಎಂದು ನೋಡಿಕೊಳ್ಳಲು ರಥವನ್ನು ಹಿಂದಿನ ಭಾಗದಲ್ಲಿ ಹಿಡಿದು ಎತ್ತಿದನು. ರಥವು ಅವನ ಕೈಯಲ್ಲಿ ಚೆಂಡಿನ ಹಾಗೆ ಎದ್ದುಕೊಂಡಿತು. ಮತ್ತೆ ಮೆಲ್ಲನೆ ಕೆಳಗಿಳಿಸಿದನು.

ಆಮೇಲೆ ಅವನು ಹೊಂಡ ತೋಡುವ ಸುನಂದನ ಹತ್ತಿರ ಹೋಗಿ, “ಏನೋ ! ಇಷ್ಟೊಂದು ಶ್ರದ್ಧೆ

ಪ್ರಾಯದಲ್ಲಿ ನಿನಗೆ ಬರುವ ದುರ್ಮರಣವನ್ನು ನೆನೆದು ನಾನು ಬದುಕಿರುವೆನೆಂದುಕೊಳ್ಳುವಿಯಾ?” ಎಂದು ಗೋಳಿಟ್ಟಳು.

ಅವಳ ಮಾತು ಕೇಳಿದ ಕೂಡಲೇ ಬೋಧಿ ಸತ್ವನಿಗೆ ಪರಮಾನಂದವಾಯಿತು. “ಹದಿನಾರು ವರ್ಷಗಳಷ್ಟೇ ನಾನು ಮಾಡಿದ ಪ್ರಯತ್ನವು ನಾಳೆ ಫಲಬಿಡುತ್ತದೆ, ಸ್ವತಂತ್ರ ಬರುತ್ತದೆ” ಎಂದು ಕೊಂಡನು. ತನ್ನ ತಾಯಿ ಎದೆಯೊಡೆದು ಅಳುವ ಳೆಂದು ತಿಳಿದು ಕೂಡಾ ಅವಳನ್ನು ಸಮಾಧಾನ ಪಡಿಸಲು ಬಾಯಿ ತೆರೆಯಲಿಲ್ಲ.

ಬೆಳಗಾದ ಕೂಡಲೇ ಸಾರಥಿಯಾದ ಸುನಂದನು ಅವಲಕ್ಷಣದ ರಥವನ್ನು ಸಿದ್ಧಮಾಡಿ ತಂದು, ತಲೆ ಬಾಗಿಲಲ್ಲಿ ನಿಲ್ಲಿಸಿ, ಒಳಗೆ ಬಂದು ರಾಣಿಯೊಂದಿಗೆ, “ಅಮ್ಮಾ, ತಮಗೆ ಎಲ್ಲವೂ ಗೊತ್ತಿದೆಯಷ್ಟೆ? ನಾನೀಗ ರಾಜಾಜ್ಞೆಯನ್ನು ನೆರವೇರಿಸಬೇಕಾಗಿದೆ” ಎಂದನು.

ಯಿಂದ ಗುಂಡಿ ತೋಡುವುದು ಏತಕ್ಕಾಗಿ ?" ಎಂದು ಕೇಳಿದನು.

ಸುನಂದನು ಹಿಂದಿರುಗಿ ನೋಡದೆ ಯಾವನೋ ಕೇಳುವನೆಂದುಕೊಂಡು, "ನಮ್ಮ ಮಹಾರಾಜರ ಮಗ ಯಾವುದಕ್ಕೂ ಆಗದವನು. ವಿಕಲಾಂಗ, ಮೂಕ, ಕಿವುಡ. ಆದ್ದರಿಂದ ಇಲ್ಲಿ ಹೊಂಡ ತೋಡಿ ಅವನನ್ನು ಹುಗಿದು ಬರಲು ಮಹಾರಾಜರು ಅಪ್ಪಣೆ ಮಾಡಿದ್ದಾರೆ" ಎಂದನು.

"ನನ್ನನ್ನು ಸರಿಯಾಗಿ ನೋಡು. ನಾನು ವಿಕಲಾಂಗನಲ್ಲ. ಕಿವುಡನೂ ಅಲ್ಲ. ನನ್ನನ್ನು ಹುಗಿದರೆ ನಿನಗೆ ಮಹಾಪಾತಕವು ಬರುತ್ತದೆ. ರಾಜನಿಗೆ ನಾನು ಸತ್ತುಹೋದಂತಾದರೆ ಸಾಕಲ್ಲವೆ ? ಅದಕ್ಕಾಗಿ ಈ ಪಾಪ ಬೇಡ" ಎಂದನು ಬೋಧಿಸತ್ವ.

ಸಾರಥಿ ಸುನಂದನು ಹಿಂದಿರುಗಿ ನೋಡಿ, ಬೆರಗಾಗಿ, "ಯಾರು ನೀವು ? ನಿಮ್ಮ ಹೆಸರೇನು ? ನಿಮ್ಮ ತಂದೆಯ ಹೆಸರೇನು ?" ಎಂದನು.

ಬೋಧಿಸತ್ವನು ನಿಜಸಂಗತಿಯನ್ನೇ ಹೇಳಿದನು. ಸಾರಥಿ ನಂಬಲಿಲ್ಲ. ಅವನು ರಥದ ಹತ್ತಿರ ಹೋಗಿ, ಅದರಲ್ಲಿ ರಾಜಕುಮಾರನನ್ನು ಕಾಣದೆ, ತಲೆ ತುರಿಸಿ ಕೊಳ್ಳುತ್ತ ನಿಜಸಂಗತಿ ತಿಳಿದುಕೊಂಡು, ಬೋಧಿ ಸತ್ವನ ಕಾಲಿಗೆ ಅಡ್ಡಬಿದ್ದು, "ಮಹಾರಾಜರೇ, ಹಾಗಿರುವಾಗ ತಾವು ಈ ಹಾಳಾದ ಕಾಡಿಗೆ ಏಕೆ ಬರಬೇಕಿತ್ತು ? ನಗರಕ್ಕೆ ನಡೆಯಿರಿ. ಹಾಯಾಗಿ ರಾಜ್ಯಭಾರ ಮಾಡುವಿರಂತೆ !" ಎಂದನು.

"ಹುಚ್ಚನೇ ! ನನಗೆ ಇನ್ನು ಯಾರ ಸಂತೋಷದ ಮೇಲೆಯೂ ಆಕ್ಕರೆ ಇಲ್ಲ. ಈ ದಿನ ನನ್ನ ಜನ್ಮವು ಪಾರಣವಾಯಿತು. ನಾನು ಸಂಪೂರ್ಣ ಮಾನವ ನಾಗಿದ್ದೇನೆ" ಎಂದನು ಬೋಧಿಸತ್ವ.

"ಹಾಗಾದರೆ ತಾವು ಇಷ್ಟು ಕಾಲದವರೆಗೆ ಮೂಗನಾಗಿ ಕಿವುಡಾಗಿ ಏಕೆ ನಟಿಸಿದಿರಿ ಮಹಾ ರಾಜರೇ ?" ಎಂದು ಕೇಳಿದನು ಸಾರಥಿ.



"ಒಂದು ಕಾಲದಲ್ಲಿ ನಾನು ಮಹಾರಾಜನಾಗಿ ದೇಶವನ್ನು ಆಳಿಕೊಂಡಿದ್ದೆ. ಅದರಿಂದಾಗಿ ಘೋರ ವಾದ ನರಕವಾಸವನ್ನು ಅನುಭವಿಸಿದೆ. ಮತ್ತೆ ರಾಜನಾಗಬೇಕಾಗುವುದೆಂಬ ಭಯದಲ್ಲಿ ನನ್ನ ಬಾಯಿ ಕಟ್ಟಿಹೋಯಿತು. ನಾನು ಕಣ್ಣು ಕಿವಿಗಳಿಂದ ನೋಡುತ್ತಾ, ಕೇಳುತ್ತಾ ಇರುವಾಗಲೇ ನನ್ನ ತಂದೆ ನಿರ್ದಯದಿಂದ ನಾಲ್ಕು ಮಂದಿಗೆ ಕ್ರೂರ ಶಿಕ್ಷೆ ವಿಧಿಸಿದರು. ಅಂದಿಗೆ ನನ್ನ ಕಿವಿಗಳು ಹೋದ ಹಾಗಾಯಿತು. ನಾನು ಮೂಢನ ಹಾಗಾದೆನು. ಈ ಜೀವನವು ನೀರಿನ ಗುಳ್ಳೆಯ ಹಾಗಿನದು. ದುಃಖ ಮಯವಾದುದು ಎಂದು ತಿಳಿದೆನು. ಇದಕ್ಕಾಗಿ ಇನ್ನೊಬ್ಬರ ಮೇಲೆ ಸಿಟ್ಟು ಮಾಡಬಹುದೆ ? ಇನ್ನೊಬ್ಬರನ್ನು ದಂಡಿಸಬಹುದೇ ? ಈ ಸಣ್ಣ ಸತ್ಯಗಳು ಗೊತ್ತಾಗದೆ ಮಾನವರು ಅಜ್ಞಾನ ದಲ್ಲಿ ಬಿದ್ದು ಹೊರಳಾಡುತ್ತಿದ್ದಾರೆ !" ಎಂದನು ಬೋಧಿಸತ್ವ.



ಆಗ ಸಾರಥಿ "ಮಹಾರಾಜರೇ! ಎಷ್ಟು ಒಳ್ಳೆಯ ಮಾತಾಡುವಿರಿ! ನಾನೂ ನಿಮ್ಮೊಂದಿಗೇ ಇದ್ದು ಬಿಡುತ್ತೇನೆ" ಎಂದನು.

"ಹಾಗೆ ಕೂಡದು. ಈ ರಥವು ಮಹಾರಾಜನದು. ಅದನ್ನು ರಾಜನಿಗೆ ಕೊಟ್ಟುಬಿಡು. ನಿನ್ನ ಋಣಾನುಬಂಧಗಳು ಏನೇನಿವೆಯೋ ಅವೆಲ್ಲವನ್ನೂ ತೊಳೆದುಕೊಂಡು ಸನ್ಯಾಸವನ್ನು ಹಿಡಿ. ಅದುವರೆಗೂ ನೀನು ಸ್ವತಂತ್ರನಾಗಲು ಸಾಧ್ಯವಿಲ್ಲ" ಎಂದನು ಬೋಧಿಸತ್ವ.

ತಾನು ರಾಜಧಾನಿಗೆ ಹೋದ ಕೂಡಲೇ ರಾಜಕುಮಾರನು ತನ್ನ ದಾರಿ ಹಿಡಿದು ಹೊರಟು ಹೋಗಿಬಿಡುತ್ತಾನೆಂದುಕೊಂಡು ಸಾರಥಿ, "ಸ್ವಾಮಿ, ನಾನು ತಿರುಗಿ ಬರುವವರೆಗೂ ಇಲ್ಲಿಯೇ ಇರುವೆನೆಂದು ಮಾತು ಕೊಡಿರಿ. ಮಹಾರಾಜರನ್ನು ಕರೆದುಕೊಂಡು ಬರುತ್ತೇನೆ. ಅವರು ನಿಮ್ಮನ್ನು ನೋಡಿ ಬಹಳ ಸಂತೋಷಪಡುತ್ತಾರೆ" ಎಂದನು.

ಅವನು ಕೇಳಿಕೊಂಡ ಪ್ರಕಾರ ಅಲ್ಲಿಯೇ ಇರುವೆನೆಂದು ಬೋಧಿಸತ್ವನು ಮಾತುಕೊಟ್ಟನು. ಸಾರಥಿ ಅವನ ಪಾದಗಳನ್ನು ಕಣ್ಣಿಗೆ ಒತ್ತಿಕೊಂಡು ರಥವನ್ನು ತೆಗೆದುಕೊಂಡು ಅಲ್ಲಿಂದ ಹೊರಟನು.

ತನ್ನ ಕುಮಾರನಿಲ್ಲದೆ, ಖಾಲಿ ರಥವು ತಿರುಗಿ ಬರುವುದನ್ನು ರಾಣಿ ಚಂದ್ರಾದೇವಿ ಕಿಟಿಕಿಯಿಂದ ನೋಡಿ ಬೋರಿಟ್ಟು ಅಳತೊಡಗಿದಳು. ಅವಳು ಸಾರಥಿಯನ್ನು ಕರೆಯಿಸಿ, "ಏನಪ್ಪಾ, ನನ್ನ ಮಗ ಕಡೇ ಕ್ಷಣದಲ್ಲಾದರೂ ಬಾಯಿಬಿಟ್ಟು ಏನಾದರೂ ಹೇಳಿದನೇ? ಕೈಕಾಲುಗಳನ್ನು ಆಡಿಸಿ ಚಡಪಡಿಸಲಿಲ್ಲವೇ ಅಪ್ಪಾ?" ಎಂದು ಕೇಳಿದಳು.

"ನಿಮ್ಮ ಕುಮಾರ ನೀವೆಲ್ಲಾ ತಿಳಿಯುವಂತೆ ಇರಲಿಲ್ಲ ಅಮ್ಮಾ. ರಾಜನಾಗಲು ಹೆದರಿಕೊಂಡೇ ಹಾಗೆಲ್ಲಾ ನಟಿಸಿದ್ದಾರೆ. ಆಹಾ! ಅವರದು ಕಂಚಿನಂಥ ಕಂಠಸ್ವರ. ಎಷ್ಟೊಂದು ಬುದ್ಧಿವಂತರು! ನಮ್ಮೆಲ್ಲರ ಹಾಗೆ ಬದುಕಲು ಇಷ್ಟವಿಲ್ಲದೆ ದಿವ್ಯವಾದ ಮಾರ್ಗವನ್ನು ಹಿಡಿದಿದ್ದಾರೆ. ನಾನೇಕೆ ಹೇಳಲಿ? ನೀವೇ ಕಣ್ಣಾರೆ ನೋಡುವಿರಮ್ಮಾ" ಎಂದು ಸಾರಥಿ ನಡೆದ ಸಂಗತಿಯನ್ನೆಲ್ಲಾ ಚಂದ್ರಾದೇವಿಯೊಂದಿಗೆ ಹೇಳಿದನು. ಅವಳ ದುಃಖಾಶ್ರುಗಳು ಆನಂದಾಶ್ರುಗಳಾಗಿ ಮಾರ್ಪಟ್ಟವು. ಅವಳು ಕೂಡಲೇ ಆ ದಿವ್ಯ ಸಂಗತಿಗಳನ್ನು ರಾಜನಿಗೆ ತಿಳಿಸಿದಳು.

ಅದನ್ನು ಕೇಳಿದ ಕೂಡಲೇ ರಾಜನ ಕಾಲುಗಳು ನಿಲ್ಲಲಾರದೆ ಹೋದುವು. ತನ್ನ ಕುಮಾರನನ್ನು ನೋಡಲು ಅವನು ಬ್ರಹ್ಮಾಂಡದಷ್ಟು ಪರಿವಾರವನ್ನು ಕರೆದುಕೊಂಡು ಹೊರಟನು. ಅವರೆಲ್ಲರೂ ಬೋಧಿಸತ್ವನಿರುವಲ್ಲಿಗೆ ಹೋಗಿ ಸೇರುವುದರೊಳಗೆ, ಇಂದ್ರನು ಬೋಧಿಸತ್ವನಿಗೆ ಒಂದು ಒಳ್ಳೆಯ ಪರ್ಣಶಾಲೆಯನ್ನು ನಿರ್ಮಿಸುವಂತೆ ವಿಶ್ವಕರ್ಮನಿಗೆ ಆಜ್ಞೆ ಮಾಡಿದನು. ರಾಜನು ಸಪರಿವಾರದೊಂದಿಗೆ ಆ ಪರ್ಣಶಾಲೆಯ ಬಳಿಗೇ ಬಂದನು

ಬೋಧಿಸತ್ವನು ತನ್ನ ತಂದೆಗಾಗಿ ಒಂದು ಆಸನವನ್ನು ಇಡಿಸಿದನು. ಆದರೆ ರಾಜನು ಅದರ ಮೇಲೆ ಕುಳಿತುಕೊಳ್ಳದೆ, ಮಗನ ಮೇಲೆ ಹುಟ್ಟಿದ ಗೌರವ ಭಾವದಿಂದ ಕೆಳಗೇ ಕುಳಿತನು. ಅವನು ತನ್ನ ಮಗನನ್ನು ಹೇಗಾದರೂ ಕರೆದುಕೊಂಡು ಹೋಗಬೇಕೆಂಬ ಉದ್ದೇಶದಲ್ಲಿ, "ನಿನಗೆ ಪರ್ಣಶಾಲೆಯೆಂದರೇನಿದು ? ನೀನು ದೊರಗು ನೆಲದ ಮೇಲೆ ಮಲಗುವುದೆಂದರೇನು ? ನಿನಗೆ ದೊಡ್ಡ ದೊಡ್ಡ ಸೌಧಗಳಿವೆ. ದಾಸದಾಸಿಯರಿದ್ದಾರೆ. ರಾಜ್ಯವಿದೆ, ಬಂದು ಹಾಯಾಗಿ ರಾಜ್ಯವನ್ನು ಆಳಿಕೊಂಡಿರಪ್ಪಾ" ಎಂದನು.

"ಅಪ್ಪಾ, ನೀವು ಹೇಳುವುದೆಲ್ಲವೂ ಬಾಡಿ ಹೋಗುವ ಸುಖಗಳು. ನನಗೆ ಅವುಗಳೊಂದಿಗೆ ಯಾವ ಸಂಬಂಧವೂ ಇಲ್ಲ. ನಾವು ರಾಜ್ಯಗಳನ್ನು ಕುರಿತೂ, ಸಿಂಹಾಸನಗಳನ್ನು ಕುರಿತೂ ಆಲೋಚಿಸಿಕೊಂಡಿರುತ್ತೇವೆ. ಮೂರು ಗತಿಗಳು ನಮ್ಮನ್ನು ಬಿಡುವಂಥವಲ್ಲ. ಒಂದು ಯಾವಾಗಲೂ ನಮ್ಮನ್ನೇ ಹೊಂಚಿಕೊಂಡಿರುತ್ತದೆ. ಇನ್ನೊಂದು ತನ್ನ ಕೆಲಸ ತಾನು ಮಾಡಿಕೊಂಡು ಹೋಗುತ್ತದೆ. ಮೂರನೆಯದು ಅದನ್ನು ಕಂಡುಹಿಡಿದು ಹೊಡೆದು ಹಾಕುತ್ತದೆ. ಹೊಂಚಿಕೊಂಡಿರುವಂತಹುದು ವೃದ್ಧಾಪ್ಯ. ತನ್ನ ಕೆಲಸ ತಾನು ಮಾಡುತ್ತಾ ಹೋಗುವುದು ಕಾಲ. ಹೊಡೆದು ಹಾಕುವುದು ಮೃತ್ಯು" ಎಂದನು ಬೋಧಿಸತ್ವ.

"ನಿನ್ನ ಮಾತು ಕೇಳುತ್ತಾ ಇದ್ದರೆ ನನಗೇ ಜೀವಿತದ ಮೇಲೆ ಅಸಹ್ಯ ಹುಟ್ಟುತ್ತದೆ. ನನಗೆ ರಾಜ್ಯವೇ ಬೇಡ. ನಾನು ತಪಸ್ಸಿಗೆ ಹೋಗುತ್ತೇನೆ. ನೀನು ನನಗೆ ಬದಲಾಗಿ ರಾಜ್ಯವನ್ನು ಆಳು" ಎಂದನು ರಾಜ.

"ಎಲ್ಲವನ್ನೂ ತ್ಯಜಿಸಿ ನಿಂತಿರುವ ನನಗೆ ನಿಮ್ಮ ರಾಜ್ಯವೇತಕ್ಕೆ ?" ಎಂದು ಬೋಧಿಸತ್ವನು ಅಲ್ಲಿ ಸೇರಿದವರೆಲ್ಲರಿಗೂ ಜೀವಿತದ ಪರಮಾರ್ಥವನ್ನು ಕುರಿತು ಬೋಧಿಸಲು ತೊಡಗಿದನು. ಅವನ ಬೋಧನೆಗಳನ್ನು ಕೇಳಲು ನಗರಕ್ಕೆ ನಗರವೇ ಕದಲಿ ಬಂದಿತು. ಕಾಲಕ್ರಮದಲ್ಲಿ ಎಲ್ಲರೂ ಸನ್ಯಾಸಿಗಳಾಗಿ ನಗರವು ಪಾಳು ಬೀಳುವಂತೆ ಮಾಡಿದರು.

ಕಾಶೀ ರಾಜನು ಸನ್ಯಾಸಿಯಾದನೆಂದು ತಿಳಿದ ಕೂಡಲೇ ಬೋಧಿಸತ್ವನ ಬೋಧನೆಗಳನ್ನು ಕೇಳಲು ಮತ್ತೊಬ್ಬ ರಾಜನೂ. ಅವನ ಪ್ರಜೆಗಳೂ ಅಲ್ಲಿಗೆ ಬಂದರು. ಹೀಗೆ ಮೂರು ರಾಜ್ಯಗಳು ಪಾಳು ಬಿದ್ದು ಹೋದುವು. ಆ ರಾಜ್ಯಗಳಲ್ಲಿದ್ದ ಪ್ರಾಣಿಗಳೆಲ್ಲಾ ವನ್ಯ ಮೃಗಗಳಾಗಿ ಮಾರ್ಪಟ್ಟುವು. ಅಲ್ಲಿಯ ನಗರಗಳಲ್ಲಿದ್ದ ಸಂಪತ್ತುಗಳಿಗೆ ಮಣ್ಣಿನ ಮಡಕೆಗಳಿಗಿರುವ ಬೆಲೆ ಕೂಡಾ ಇಲ್ಲದೆ ಹೋಯಿತು.





# ರಾಜಸತ್ಕಾರ

ಹಿಂದೆ ಒಂದಾನೊಂದು ಗ್ರಾಮದಲ್ಲಿ ಗೋವಿಂದ ನೆಂಬೊಬ್ಬ ಯುವಕನಿದ್ದನು. ಅವನ ಬುದ್ಧಿ ದರ್ಭೆಯ ಮೊನೆಯಂತೆ ಸುನಿಶಿತವಾದುದು. ಆದರೆ ಶಾರೀರಕವಾಗಿ ಅವನು ದುರ್ಬಲನಾಗಿದ್ದನು. ಗ್ರಾಮ ಜೀವಿತದಲ್ಲಿ ಶರೀರ ಶ್ರಮಕ್ಕೆ ಹೆಚ್ಚಿನ ಬೆಲೆ ಇರುವುದರಿಂದ, ಗೋವಿಂದನು ಕೈಲಾಗದವ ನೆಂತಲೇ ಎಲ್ಲರಿಂದ ಹೇಳಿಸಿಕೊಳ್ಳುತ್ತಿದ್ದನು. ಅವನ ಅಣ್ಣನೂ ಅತ್ತಿಗೆಯೂ ಅವನನ್ನು ನೋಡಿ, ಯಾವ ಕೆಲಸವನ್ನೂ ಮಾಡಲಾಗದವನೆಂದು ಬಹಳ ಬೇಸತ್ತುಕೊಳ್ಳುತ್ತಿದ್ದರು.

ಆದರೆ ಗೋವಿಂದನು ಊರಿನ ಜನರಿಗೆ ಒಳ್ಳೊಳ್ಳೆಯ ಸಲಹೆಗಳನ್ನು ಹೇಳುತ್ತಿದ್ದನು. ಅದು ಒಳ್ಳೆಯ ಸಲಹೆಯೆನಿಸಿ ಅದರಂತೆ ಮಾಡಿದವರಿಗೆ ಬಹಳ ಲಾಭ ಬರುತ್ತಿದ್ದಿತು. ಅವರು ಗೋವಿಂದನ ಅಣ್ಣನೊಂದಿಗೆ, "ನಿಮ್ಮ ತಮ್ಮನು ಕೆಲಸ ಮಾಡಲು ಶಕ್ತಿ ಇಲ್ಲದವನಾದರೂ ಒಳ್ಳೇ ತಿಳು ವಳಿಕೆಯುಳ್ಳ, ಚುರುಕು ಬುದ್ಧಿಯವನು. ಅವನನ್ನು ನಿಃಶಕ್ತನೆಂದು ಹೀಯಾಳಿಸುವುದು ಸರಿಯಲ್ಲ" ಎನ್ನುತ್ತಿದ್ದರು.

ಬರಬರುತ್ತ ತಮ್ಮನ ಬುದ್ಧಿವಂತಿಕೆಯನ್ನು ಕುರಿತು ಊರಿನವರು ಬಹಳವಾಗಿ ಮೆಚ್ಚುವುದು ಕೂಡಾ ಅಣ್ಣನಿಗೆ ಬೇಸರತಂದಿತು. "ಗೋವಿಂದನು ಅಷ್ಟು ಬುದ್ಧಿವಂತನಾಗಿದ್ದರೆ ರಾಜಸಭೆಗೆ ಹೋಗಿ ಸನ್ಮಾನ ಪಡೆಯಬಾರದೆ ? ಇಲ್ಲೇಕೆ ಕುಳಿತಿರ ಬೇಕು ?" ಎಂದನು ಹೆಂಡತಿಯೊಂದಿಗೆ.

"ಅಷ್ಟೊಂದು ಪ್ರಯೋಜಕನಾಗಿದ್ದರೆ ಮತ್ತೇನು ಕಡಿಮೆ !" ಎಂದಳು ಹೆಂಡತಿ.

ಈ ಮಾತುಗಳನ್ನು ಅಲ್ಲೇ ಕುಳಿತಿದ್ದ ಗೋವಿಂದನು ಕೇಳಿಸಿಕೊಂಡನು. ತಾನೇಕೆ ರಾಜಸನ್ಮಾನ ಪಡೆಯಲು ಪ್ರಯತ್ನಿಸಬಾರದು ? ಎಂದುತೋರಿತು. ಯುಗಾದಿಯ ಸಮಯದಲ್ಲಿ ಮಹಾರಾಜರು ದರ್ಬಾರು ನಡೆಸಿ ಪುರಜನರ ಮುಂದೆ ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಸರಿಯಾದ ಉತ್ತರ ಹೇಳಿದವರಿಗೆ ಬಹುಮಾನ ಕೊಡುತ್ತಾರೆ. ಬೇಗದಲ್ಲೇ ಯುಗಾದಿ ಬರಲಿಕ್ಕಿದೆ. ಆ ದಿನಕ್ಕೆ ಸರಿಯಾಗಿ ಗೋವಿಂದನು ರಾಜಧಾನಿಗೆ ಹೋಗಿ, ರಾಜಸಭೆಗೆ ಪ್ರವೇಶ ಮಾಡಿದನು. ರಾಜನು ಕೇಳುವ ಪ್ರಶ್ನೆಗಳಿಗೆ ಉತ್ತರ ಕೊಡಲು ಸಿದ್ಧರಾಗಿರು

ಅವರನ್ನು ಒಂದು ಪ್ರತ್ಯೇಕ ಸ್ಥಳದಲ್ಲಿ ಕೂಡಿಸುತ್ತಿದ್ದರು. ಆಮೇಲೆ ರಾಜನು ಅವರನ್ನು ನೋಡಿ ಪ್ರಶ್ನೆಗಳನ್ನು ಕೇಳಿದನು. ಅವೆಲ್ಲಾ ಸಾಧಾರಣವಾದ ಪ್ರಶ್ನೆಗಳೇ ಆಗಿದ್ದುವು.



"ನಮ್ಮ ರಾಜ್ಯದಲ್ಲಿ ಸತ್ಯಸಂಧರಾದವರು ಎಷ್ಟು ಮಂದಿ ಇದ್ದಾರೆ ?" ಎಂದು ರಾಜನು ಮೊದಲನೇ ಪ್ರಶ್ನೆ ಕೇಳಿದನು.

ರಾಜ್ಯದಲ್ಲಿ ಸುಮಾರು ಒಂದು ಲಕ್ಷ ಜನರು ಸತ್ಯಸಂಧರಿರುವರೆಂದು ಒಬ್ಬನು ಹೇಳಿದರೆ, ಜನ ಸಂಖ್ಯೆಯ ಹತ್ತನೇ ಒಂದು ಭಾಗದಷ್ಟು ಸತ್ಯಸಂಧರಿರುವರೆಂದು ಇನ್ನೊಬ್ಬನು ಉತ್ತರ ಕೊಟ್ಟನು.

"ತಮ್ಮ ಕೈ ಕೆಳಗೆ ಸೇವೆ ಮಾಡುವ ಐನೂರು ಮಂದಿಗಳೂ ಸತ್ಯಸಂಧರೇ" ಎಂದನು ಗೋವಿಂದ.

"ಅದು ಹೇಗೆ ಅಷ್ಟು ಖಂಡಿತ ಹೇಳುವಿ ?" ಎಂದು ಕೇಳಿದನು ರಾಜ.

"ಅವರಲ್ಲಿ ಸತ್ಯಸಂಧನಲ್ಲದವನಿದ್ದರೆ ತಾವು ಅವನನ್ನು ಎಂದೋ ಕಳುಹಿಸಿಬಿಡುತ್ತಿದ್ದಿರಿ" ಎಂದನು ಗೋವಿಂದ.

ರಾಜನು ಮತ್ತೊಂದು ಪ್ರಶ್ನೆ ಕೇಳಿದನು: "ನನಗೆ ಇಷ್ಟವಾದ ಬಟ್ಟೆಗಳು ಹೇಗೆ ದೊರಕುವುವೆಂದು ಹೇಳುವಿರಾ ?"

"ಪ್ರಜೆಗಳು ನಿಮಗೆ ಕಾಣಿಕೆಯಾಗಿ ಕೊಡುತ್ತಾರೆ" ಎಂದನು ಒಬ್ಬ. "ಹತ್ತಿಯಿಂದ ಬರುತ್ತವೆ" ಎಂದನು ಮತ್ತೊಬ್ಬ. ಹೀಗೆ ಒಬ್ಬೊಬ್ಬರು ಒಂದೊಂದು ಹೇಳಿದರು.

"ತಮ್ಮ ಮನೋಭಾವವನ್ನು ಅರಿತುಕೊಂಡ ಜಾಣರಾದ ನೇಯಿಗೆಗಾರರು ನಿಮಗೆ ಇಷ್ಟವಾದ ಬಟ್ಟೆಗಳನ್ನು ನೇಯ್ದುಕೊಡುತ್ತಾರೆ" ಎಂದನು ಗೋವಿಂದ.

"ಯಾರೂ ನಂಬಲಾಗದ ಸುಳ್ಳು ಹೇಳಿರಿ" ಎಂದನು ರಾಜ.

"ನನಗೆ ಬಹಳ ತಲೆನೋವಾಗಿದೆ" ಎಂದು ಒಬ್ಬನು ಹೇಳಿದನು.

"ನಾನು ಗಾಳಿಯಲ್ಲಿ ಹಾರಿದೆನು" ಎಂದನು ಇನ್ನೊಬ್ಬ.

"ನನ್ನ ಕಾಲು ಮುರಿದು ಬೇರೆ ಬೇರೆಯಾಗಿ ಮತ್ತೆ ಅಂಟಿಕೊಂಡಿವೆ" ಎಂದನು ಮಗದೊಬ್ಬ.

"ಈ ಸಭೆಯಲ್ಲಿರುವವರೆಲ್ಲರೂ ಎಮ್ಮೆಗಳು" ಎಂದನು ಗೋವಿಂದ.

ಈ ವಿಧವಾಗಿ ಸ್ವಲ್ಪ ಹೊತ್ತು ವಿನೋದ ಕಾಲಕ್ಷೇಪವು ನಡೆದ ಮೇಲೆ, ಮಹಾರಾಜನು ಸಭೆಯಲ್ಲಿ ಕೆಲವರಿಗೆ ಬಹುಮಾನ ಕೊಡಿಸಿದನು. ಗೋವಿಂದನಿಗೆ ಕೂಡಾ ಬಹುಮಾನ ಬಂತು. ಆದರೆ ಅದೇನೂ ಅಷ್ಟು ದೊಡ್ಡ ಬಹುಮಾನವಾಗಿರಲಿಲ್ಲ. ತಾಂಬೂಲದಲ್ಲಿ ಒಂದು ಬಂಗಾರದ ನಾಣ್ಯವನ್ನಿಟ್ಟು ಒಂದು ಜತೆ ಒಳ್ಳೆಯ ಪಂಚೆಗಳನ್ನು ಮಹಾರಾಜನು ಕೊಡಿಸಿದ್ದನು. ಪ್ರತ್ಯೇಕವಾದ ಔತಣದ

ಭೋಜನಕ್ಕೆ ಅವನನ್ನು ಕೂಡಾ ಆಹ್ವಾನಿಸಿದರು. ಗೋವಿಂದನು ಭೋಜನಶಾಲೆಗೆ ಹೋಗುವಾಗ, ರಾಜನು ಕೊಟ್ಟ ಬಟ್ಟೆಗಳನ್ನು ಮತ್ತಾರಿಗೋ ಕೊಟ್ಟು, ತಾನು ಉಟ್ಟುಕೊಂಡಿದ್ದ ಬಟ್ಟೆಯೊಂದಿಗೇ ಇದ್ದನು. ಉಳಿದ ಬಹುಮಾನಿತರೆಲ್ಲಾ ರಾಜನು ಕೊಟ್ಟ ಹೊಸ ಬಟ್ಟೆಗಳನ್ನು ಉಟ್ಟುಕೊಂಡಿದ್ದರು. ಊಟದಲ್ಲಿ ಕೂಡಾ ಅವನು ಸಾಧಾರಣವಾಗಿ ತಾನು ಊಟಮಾಡುವ ಚಟ್ನಿಸಾರನ್ನ ಮುಚ್ಚಿಗೆಯಷ್ಟೇ ಹಾಕಿಸಿಕೊಂಡು ಊಟ ಮುಗಿಸಿದನು. ಒಳ್ಳೊಳ್ಳೆಯ ಭಕ್ಷ್ಯಗಳನ್ನೂ, ಪಲ್ಯಗಳನ್ನೂ, ಪಾಯಸಗಳನ್ನೂ ಮುಟ್ಟಲಿಲ್ಲ.

ಗೋವಿಂದನ ವಿಚಿತ್ರ ವರ್ತನೆಯನ್ನು ಕುರಿತು ಮಹಾರಾಜನಿಗೆ ಸುದ್ದಿ ಹೋಯಿತು. ರಾಜನು ಗೋವಿಂದನನ್ನು ತನ್ನ ಬಳಿಗೆ ಕರೆಯಿಸಿ, “ನಾನು ಬಹುಮಾನವಾಗಿ ಕೊಟ್ಟ ಬಟ್ಟೆಗಳನ್ನು ನೀನು ಉಟ್ಟುಕೊಳ್ಳಲಿಲ್ಲ. ಊಟದಲ್ಲಿ ಕೂಡಾ ಔತಣದ ವಿಶೇಷ ಭಕ್ಷ್ಯ ಭೋಜ್ಯಗಳೊಂದೂ ಮುಟ್ಟಲಿಲ್ಲವಂತೆ. ಇದು ನನಗೆ ಅವಮಾನ ಮಾಡಿದಂತೆ ಅಲ್ಲವೇನು ? ” ಎಂದು ಕೇಳಿದನು.

“ಮಹಾರಾಜಾ, ನಾನು ಬಡವನು. ತಾವು ಕೊಟ್ಟ ಒಳ್ಳೆಯ ಬಟ್ಟೆಗಳನ್ನು ಈಗ ಕಟ್ಟಿಕೊಂಡೆನೆಂದರೆ, ನನಗೆ ಮತ್ತೆ ಬಡತನದ ಬಟ್ಟೆ ಉಟ್ಟುಕೊಳ್ಳಲು ಮನಸ್ಸಾಗದು. ಇಷ್ಟು ಬೆಲೆಯ ಬಟ್ಟೆಗಳನ್ನು ಕೊಂಡುಕೊಳ್ಳುವ ಶಕ್ತಿಯೂ ಇರದು. ಆದ್ದರಿಂದ ಅವುಗಳನ್ನು ದಾನ ಮಾಡಿಬಿಟ್ಟೆನು. ದಿನಾ ಚಟ್ನಿ ನಂಜಿಕೊಂಡು ಗಂಜಿ ಕುಡಿಯುವಂತಹ ನನ್ನಂತಹವರು ಪಂಚಭಕ್ಷ್ಯಪರಮಾನ್ನಗಳ ರುಚಿ ಹಿಡಿದು ಬಿಟ್ಟರೆ, ಹಣವಿದ್ದವರ ಅಭಿಲಾಷೆಗಳು ಬಂದು, ಅದರಿಂದ ಕಳವು ಮೋಸ ಮೊದಲಾದ ದುರ್ಬುದ್ಧಿಗಳಿಗೆ ಮನಸ್ಸು ಹೋಗುತ್ತದೆ. ಆದುದರಿಂದ ನನ್ನ ಅರ್ಹತೆಗೆ ತಕ್ಕ ಹಾಗೇ ಊಟಮಾಡಿದೆನು. ಅವಮಾನ ಪಡಿಸುವ ದುರ್ಬುದ್ಧಿ ನನಗಿಲ್ಲವೇ ಇಲ್ಲ. ಹಸಿವೆಯಾದುದರಿಂದ ಎಲ್ಲರೊಂದಿಗೆ ಊಟಕ್ಕೆ ಕುಳಿತೆನು ” ಎಂದನು ಗೋವಿಂದ.

“ನಾನು ಕೊಟ್ಟ ಬಂಗಾರದ ನಾಣ್ಯವನ್ನೂ ದಾನ ಮಾಡಿದೆಯಾ ? ” ಎಂದು ಕೇಳಿದನು ರಾಜ.

“ಇಲ್ಲ ಮಹಾರಾಜಾ, ನನ್ನನ್ನು ಪೋಷಿಸುವ ನನ್ನ ಅಣ್ಣನಿಗೆ ಕೊಡಬೇಕೆಂದು ನನ್ನ ಕೈಯಲ್ಲಿಟ್ಟುಕೊಂಡಿದ್ದೇನೆ ” ಎಂದನು ಗೋವಿಂದ.

ಗೋವಿಂದನ ಸದ್ಬುದ್ಧಿಗೆ ಮಹಾರಾಜನು ಬಹಳವಾಗಿ ಮೆಚ್ಚಿ, ಅವನಿಗೆ ಸಾವಿರ ಬಂಗಾರದ ನಾಣ್ಯಗಳನ್ನು ಕೊಡಿಸಿದನು. ಹಾಗೆ ರಾಜನು ಅವನ ಮನೆಯ ಬಡತನ ನೀಗಿಸಿ, ಅವನಿಗೆ ತನ್ನ ಆಸ್ಥಾನದಲ್ಲಿ ಒಂದು ಉದ್ಯೋಗವನ್ನೂ ಕೊಡಿಸಿದನು.



ಪಕ್ಷಿಗಳು, ಪ್ರಾಣಿಗಳು

# ಅಮೆರಿಕಾ ರಾಕೂನ್

ಉತ್ತರ ಅಮೆರಿಕಾದೊಳಗಿನ ರಾಕೂನ್ ಪ್ರಾಣಿಗಳು ಆಹಾರನ್ವೇಷಣೆ ಮಾಡುವ ಪದ್ಧತಿ ಬಹಳ ವಿನೋದವಾಗಿರುತ್ತದೆ. ಕರಡಿ ಜಾತಿಗೆ ಸೇರಿದ ಈ ರಾಕೂನ್‌ಗಳು ಹೊತ್ತು ಮುಳುಗಿ ಕತ್ತಲೆ ಹರಡಿಕೊಂಡು ಬರುವಾಗಲೇ ಆಹಾರಕ್ಕಾಗಿ ಹೊರಡುತ್ತವೆ. ಚಿಕ್ಕ ಚಿಕ್ಕ ಹಕ್ಕಿಗಳನ್ನೂ, ಮೊಟ್ಟೆಗಳನ್ನೂ, ಇಲಿಗಳನ್ನೂ, ಕಪ್ಪೆಗಳನ್ನೂ ಹಿಡಿದು ತಿನ್ನುತ್ತವೆ. ಕಾಡಿನಲ್ಲಿ ಆಹಾರ ದೊರಕದೆ ಹೋದರೆ ಸಮೀಪದಲ್ಲಿದ್ದ ಕೋಳೀ ಗೂಡುಗಳ ಮೇಲೆ ಕಳ್ಳತನದಿಂದ ದಾಳಿ ಮಾಡುತ್ತವೆ. ಆ ಸಮಯದಲ್ಲಿ ಆಪತ್ತು ಬರಲಿರುವಂತೆ ಸಣ್ಣ ಶಬ್ದವಾದರೂ ಮಿಂಚಿನಂತೆ ಓಡಿ ಹೋಗಿ ಮರಗಳ ಕೊಂಬೆ ಸೇರಿಕೊಳ್ಳುತ್ತವೆ.

ಈ ಪ್ರಾಣಿಗಳ ಕಾಲುಗಳು ಬಹಳ ಸಣ್ಣಗಾಗಿ, ಬೆರಳುಗಳ ನಡುವೆ ಚರ್ಮವಿಲ್ಲದೆ ಇದ್ದರೂ ಇವು ಅತಿ ವೇಗವಾಗಿ ಈಜಬಲ್ಲುವು. ನದಿಯ ನೀರಿನಲ್ಲಿ ಮುಳುಗಿ ಮುಂದಿನ ಕಾಲುಗಳಿಂದ ಮೀನುಗಳನ್ನು ಹಿಡಿದುಕೊಂಡು ಮೇಲಕ್ಕೆ ಏಳುತ್ತವೆ. ಯಾವ ಆಹಾರವನ್ನಾದರೂ, ಮೀನುಗಳನ್ನಾದರೂ ಸರಿಯೆ. ನೀರಿನಲ್ಲಿ ತೊಳೆಯದೆ ತಿನ್ನುವುದಿಲ್ಲವೆಂಬುದು ಇವುಗಳ ಪ್ರತ್ಯೇಕತೆ !

ಬಾಲದೊಂದಿಗೆ ಒಂದು ಮೀಟರು ಉದ್ದವಾದ ಈ ಪ್ರಾಣಿಗಳು ಒಂದು ಕಾಲದಲ್ಲಿ ಹೇರಳವಾಗಿದ್ದವು. ಇತ್ತೀಚಿನ ಕಾಲದವರೆಗೆ ಉಣ್ಣೆದುಸ್ತುಗಳ ತಯಾರಿಕೆಗೆ ಉಪಯೋಗವಾಗುವ ಚರ್ಮಗಳನ್ನು ಕೊಡುವ ಪ್ರಾಣಿಗಳಲ್ಲಿ ರಾಕೂನ್ ಪ್ರಧಾನವಾಗಿದ್ದುವು. ಸುಮಾರು ಒಂದು ಶತಾಬ್ದದ ಕೆಳಗಿನವರೆಗೆ ಕಣಿವೆಯ ಮನುಷ್ಯರು ಹಣಕ್ಕೆ ಬದಲಾಗಿ ರಾಕೂನ್ ಚರ್ಮಗಳನ್ನೇ ವಿನಿಮಯವಾಗಿ ಬಳಸುತ್ತಿದ್ದರು.

ಸಾಧಾರಣವಾಗಿ ಮರದ ಕೊಂಬೆಗಳಲ್ಲಿ ವಾಸಿಸುವ ಈ ಪ್ರಾಣಿಗಳು, ಒಂದೊಂದು ಸಾರಿ ನೆಲದಲ್ಲಿ ಇತರ ಪ್ರಾಣಿಗಳು ಮಾಡಿದ ಬಿಲಗಳಲ್ಲಿ ತಮ್ಮ ನಿವಾಸವನ್ನು ಮಾಡಿಕೊಳ್ಳುತ್ತವೆ.

ಶರದೃತು ಬಂದ ಕೂಡಲೇ ಅನುಕೂಲವಾದ ಜಾಗ ಹುಡುಕುತ್ತ, ಶೀತಕಾಲದಲ್ಲಿ ಸೇರುವ ಚಳಿಕಾಲವನ್ನೆಲ್ಲಾ ದೀರ್ಘವಾದ ಗಾಢ ನಿದ್ರೆಯಲ್ಲೇ ಕಳೆಯುತ್ತವೆ. ವಾತಾವರಣವು ಬೆಚ್ಚಗಾಗಲು ಪ್ರಾರಂಭವಾದಾಗ ಎಚ್ಚರಕ್ಕೆ ಬಂದು ಹೊರಗೆ ಹೊರಡುತ್ತವೆ.



## ...ಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

...ಲ್ಲ ಶೀರ್ಷಿಕೆಗಳು ೧೯೮೬ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





D. M. Raja Rao — A. L. Syed

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಡಿಸೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಕಣ್ಣು ಬಿಚ್ಚಿ ಎಚ್ಚರದಲ್ಲಿರಬೇಕಾದವನು

ಎರಡನೇ ಫೋಟೋ : ಕಣ್ಣು ಮುಚ್ಚಿ ಧ್ಯಾನದಲ್ಲಿರಬೇಕಾದವನು

ಕಳುಹಿಸಿದವರು : ಕಾಂಚನ, ಪಿ. ದುರ್ಗ್, ವಿದ್ಯಾನಗರ, ಮಂಡ್ಯ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ರವಿ, ಉದಯಶಂಕರ್. ೨. ಕೊಳಲು. ೩. ಉಸ್ತಾದ್ ಬಿಸ್ಮಿಲ್ಲಾಖಾನ್. ೪. ಘಜಲ್ಸ್. ೫. ಎಂ. ಎಸ್. ಸುಬ್ಬುಲಕ್ಷ್ಮಿ.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.